ನೆಹರೂ ಬಾಲ ಪುಸ್ತಕಾಲಯ

# ರಸ್ಟಿಯ ಸಾಹಸಗಳು


ರಸ್ಕಿನ್ ಬಾಂಡ್

ಚಿತ್ರಗಳು

ಸುದ್ಧಸತ್ವ ಬಸು

ಅನುವಾದ

ಅಹಲ್ಯಾ ಚಿಂತಾಮಣಿ







ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪರಿವಿಡಿ

# ಅಜ್ಜಿಯ ಅದ್ಭುತ ಅಡಿಗೆಮನೆ

ಅಡಿಗೆ ಮನೆಯು, ಮಲಗುವ ಮನೆ ಮತ್ತು ಹಜಾರದಷ್ಟಿರದಿದ್ದರೂ ಸಾಕಷ್ಟು ದೊಡ್ಡದಾಗಿತ್ತು. ಅದರ ಪಕ್ಕದಲ್ಲೇ ಪಾತ್ರೆ ಪರಟೆ ಇಡುವ ಒಂದು ಸಣ್ಣ ಬೀರು ಇತ್ತು. ಅಲ್ಲಿ ತಿನ್ನಲು ಒಳ್ಳೆ ರುಚಿಕರವಾದ ತಿಂಡಿಗಳು ಇರುತ್ತಿದ್ದವು, ಕಬಾಬ್, ಖಾರದ ಪಲ್ಯ, ಚಾಕೊಲೇಟ್, ಕಡಲೆಬೀಜದ ಪಾಕಂಪೊಪ್ಪು, ಮೊರಬ್ಬಾ, ಗುಲಾಬ್‌ಜಾಮೂನ್, ಮಾಂಸದ ಸಿಹಿತಿಂಡಿ, ಸೇಬಿನ ಸಿಹಿತಿಂಡಿ, ಮಸಾಲೆ ತುಂಬಿ ಬೇಯಿಸಿದ ಟರ್ಕಿಕೋಳಿ, ಕೋಳಿಮರಿ ಮಾಂಸ, ಬದನೆಕಾಯಿ ಎಣ್ಣೆಗಾಯಿ, ಹಂದಿ ಮಾಂಸದ ಜೊತೆ ಮಸಾಲೆ ತುಂಬಿದ್ದ ಕೋಳಿಮರಿ!

ಅಜ್ಜಿ ಅಡಿಗೆ ಮಾಡುವುದರಲ್ಲಿ ವಿಶ್ವದಲ್ಲೇ ಅತ್ಯಂತ ನಿಷ್ಣಾತಳಾಗಿದ್ದಳು. ನಾವು ವಾಸಿಸುತ್ತಿದ್ದ ಊರಿನ ಹೆಸರು ಡೆಹ್ರಾಡೂನ್. ಅದು ಈಗಲೂ ಇದೆ. ಸ್ವಾತಂತ್ರ್ಯದ ನಂತರ ಅದು ದೊಡ್ಡದಾಗಿದೆ. ಅಲ್ಲಿ ಚಟುವಟಿಕೆಗಳು ಹೆಚ್ಚಿವೆ. ಊರಿನ ಹೊರಗಡೆ ಅಜ್ಜಿಯದೊಂದು ದೊಡ್ಡ ಮನೆ ಇತ್ತು. ಅದು ಅನೇಕ ಕೊಠಡಿಗಳನ್ನು ಹೊಂದಿದ್ದ ಹಳೆ ಮನೆಯಾಗಿತ್ತು. ಕೆಳಗಿನ ಮೈದಾನದಲ್ಲಿ ಅನೇಕ ಮರಗಳಿದ್ದವು, ಅವುಗಳಲ್ಲಿ ಹೆಚ್ಚಿನವು ಹಣ್ಣಿನ ಮರಗಳು – ಮಾವು, ಲೀಚಿ, ಸೀಬೆ, ಬಾಳೆ, ಪರಂಗಿ, ನಿಂಬೆ – ಅವಕ್ಕೆಲ್ಲಾ ಸಾಕಷ್ಟು ಜಾಗವಿತ್ತು. ಮನೆಯ ಗೋಡೆಗಳ ಮೇಲೆ ದೊಡ್ಡ ಹಲಸಿನ ಮರದ ನೆರಳು ಬೀಳುತ್ತಿತ್ತು.

*ಯಾವ ಮನೆಯ ಗೋಡೆಗಳ ಮೇಲೆ ಹಳೆಯ ಮರದ ಸೌಮ್ಯ ನೆರಳು ಬೀಳುವುದೋ ಅದು ಪವಿತ್ರ ಮನೆ...*

ಅಜ್ಜಿಯ ಆ ಮಾತುಗಳು ಇನ್ನೂ ನನಗೆ ನೆನಪಿದೆ. ಆ ಮಾತಗಳು ಎಷ್ಟು ನಿಜ, ಯಾಕೆಂದರೆ ವಾಸಿಸಲು ಅದು ಒಂದು ಒಳ್ಳೆ ಮನೆ, ಅದರಲ್ಲೂ ವಿಶೇಷವಾಗಿ, ಹಸಿವಿನಿಂದ ಸದಾ ಹೊಟ್ಟೆ ಚುರುಗುಟ್ಟುತ್ತಿದ್ದ ನನ್ನಂತಹ ಒಂಬತ್ತು ವರ್ಷದ ಹುಡುಗನಿಗೆ ಅಜ್ಜಿ ಪ್ರಪಂಚದಲ್ಲೇ ಅತ್ಯುತ್ತಮ ಅಡಿಗೆಯವಳಾಗಿದ್ದರೆ ನನ್ನಷ್ಟು ಹೆಚ್ಚು ಹಸಿವುಳ್ಳ ಹುಡುಗ

ಇಲ್ಲವೇ ಇಲ್ಲ ಎನ್ನಬೇಕು. ನಾನು ಬಹಳ ಅದೃಷ್ಟವಂತ, ಯಾಕೆಂದರೆ ಇಷ್ಟು ರುಚಿರುಚಿಯಾಗಿ ಅಡಿಗೆ ಮಾಡಿ ಬಡಿಸುವ ಅಜ್ಜಿ ಎಲ್ಲರಿಗೂ ಎಲ್ಲಿ ಸಿಗುವರು?

ನನ್ನ ತಂದೆ ತಾಯಿ ಅಸ್ಸಾಮಿನಲ್ಲಿದ್ದರು. ಅಲ್ಲಿ ನನ್ನ ತಂದೆ ಒಂದು ಟೀ ತೋಟದ ಮ್ಯಾನೇಜರ್ ಆಗಿದ್ದರು. ಪ್ರತಿ ಚಳಿಗಾಲ ನಾನು ಬೋರ್ಡಿಂಗ್ ಸ್ಕೂಲಿನಿಂದ ಮನೆಗೆ ಹೋಗುವಾಗ ಕಡೇಪಕ್ಷ ಒಂದು ತಿಂಗಳ ರಜೆಯನ್ನು ನಾನು ಅಜ್ಜಿಯೊಡನೆ ಕಳೆಯುತ್ತಿದ್ದೆ. ಅನಂತರ ಅಸ್ಸಾಂಗೆ ಹೋಗಿ, ಉಳಿದ ರಜೆಯನ್ನು ನಮ್ಮ ತಂದೆ ತಾಯಿಯ ಜೊತೆ ಕಳೆಯುತ್ತಿದ್ದೆ. ಟೀ ತೋಟಗಳಲ್ಲಿ ಆನಂದವಾಗಿ ಸಮಯ ಹೋಗುತ್ತಿತ್ತು. ಆದರೆ ನಮ್ಮ ತಾಯಿ ಅಡಿಗೆ ಮಾಡುತ್ತಿರಲಿಲ್ಲ. ಅದಕ್ಕಾಗಿ, ಅವರು ಒಬ್ಬ ನುರಿತ ಅಡಿಗೆಯವನನ್ನು ಇಟ್ಟುಕೊಂಡಿದ್ದರು. ಅವನು ಮಾಡುತ್ತಿದ್ದ ಮಟನ್‌ಕರ್ರಿ ರುಚಿಯಾಗಿರುತ್ತಿತ್ತು. ಬಾಕಿಯದೆಲ್ಲಾ ಅಷ್ಟಕ್ಕಷ್ಟೆ. ರಾತ್ರಿ ಊಟಕ್ಕೆ ಪ್ರತಿ ದಿನ ಮಟನ್‌ಕರ್ರಿ ಮಾಡಿದರೆ ಬೇಸರ ಆಗೇ ಆಗುತ್ತದೆ. ಅದರಲ್ಲೂ ಸಿಕ್ಕಿದ್ದನ್ನೆಲ್ಲಾ ತಿನ್ನುವಂತಹ ಹುಡುಗನಿಗೆ.

ಆದ್ದರಿಂದ ಅಜ್ಜಿಯ ಮನೆಗೆ ಹೋಗಿ ಅಲ್ಲಿ ಅರ್ಧದಷ್ಟು ರಜೆ ಕಳೆಯಲು ನನಗೆ ತುಂಬ ಖುಷಿಯಾಗುತ್ತಿತ್ತು. ಯಾಕೆಂದರೆ ಅವಳು ಹೆಚ್ಚು ಸಮಯ ಒಬ್ಬಳೇ ಇರುತ್ತಿದ್ದಳು. ಒಬ್ಬಳೇ ಇದ್ದರೂ ಕಾಂತ ಎಂಬ ಹೆಸರಿನ ತೋಟಗಾರ, ಹಿಂದಿನ ಮನೆಯಲ್ಲಿ ವಾಸಿಸುತ್ತಿದ್ದ. ಅವನಿಗೆ ಮೋಹನ್ ಎಂಬ ನನ್ನ ವಯಸ್ಸಿನ ಮಗ ಇದ್ದ. ಅಲ್ಲದೆ ಹೊಳೆಯುವ ನೀಲಿ ಕಣ್ಣಿನ ಸಿಯಾಮಿಸ್ ಬೆಕ್ಕು ಸೂಸಿ ಮತ್ತು ಕ್ರೇಸಿ ಎಂಬ ಹೆಸರಿನ ಒಂದು ಮಾಂಗ್ರಿಲ್ ನಾಯಿ ಇರುತ್ತಿದ್ದುವು. ಅದು ಸುಮ್ಮನೆ ಮನೆಯನ್ನು ಪ್ರದಕ್ಷಿಣೆ ಹಾಕುತ್ತಿತ್ತು. ಅಜ್ಜಿಯ ಸೋದರಳಿಯ ಅಂಕಲ್ ಕೆನ್ ಸಹ ಇರುತ್ತಿದ್ದರು. ಯಾವಾಗ ಅವರಿಗೆ ಕೆಲಸ ಇರುತ್ತಿರಲಿಲ್ಲವೋ (ಅದಂತೂ ಸರ್ವೇಸಾಮಾನ್ಯ) ಅಥವಾ ಯಾವಾಗ ಅವರಿಗೆ ಅಜ್ಜಿಯ ಕೈ ಅಡಿಗೆ ಉಣಬೇಕೆನಿಸುತ್ತಿತ್ತೋ ಆಗ ಅವರು ಅಲ್ಲಿ ಹಾಜರಾಗುತ್ತಿದ್ದರು. ಆದ್ದರಿಂದ ಅಜ್ಜಿ ನಿಜವಾಗಿಯೂ ಒಂಟಿಯಾಗಿರಲಿಲ್ಲ. ಅಷ್ಟೇ ಅಲ್ಲದೆ ನಾನು ಅಲ್ಲಿರುವುದು ಅಜ್ಜಿಗೆ ತುಂಬ ಇಷ್ಟವಾಗುತ್ತಿತ್ತು. ತನಗೊಬ್ಬಳಿಗೇ ಅಡಿಗೆ ಮಾಡಿಕೊಳ್ಳುವುದು ಅಜ್ಜಿಗೆ ಇಷ್ಟವಾಗುತ್ತಿರಲಿಲ್ಲ. ಅಡಿಗೆ ಮಾಡಿದಾಗ ತಿನ್ನಲು ಯಾರಾದರೂ ಜೊತೆಗಿದ್ದರೆ ಎಷ್ಟು ಚೆನ್ನಾಗಿರುತ್ತೆ ಎಂದು ಅಜ್ಜಿ ಅಂದುಕೊಳ್ಳುತ್ತಿದ್ದಳು. ನಾಯಿ ಮತ್ತು ಬೆಕ್ಕು, ಕೆಲವು ಸಾರಿ ಅಂಕಲ್ ಕೆನ್ ಸಹ ಅವಳ ಪರಿಶ್ರಮವನ್ನು ಮೆಚ್ಚಿಕೊಂಡಿದ್ದರು. ಆದರೆ ಪುಷ್ಕಳ ಭೋಜನಕ್ಕಾಗಿ ಹಾತೊರೆಯುವ ಹುಡುಗನೊಬ್ಬನಿಗೆ ಉಣಬಡಿಸಲು ಆಸೆಪಡುವುದು ಪಾಕಪ್ರವೀಣೆಗೆ ಸಹಜವೇ ತಾನೆ. ಏಕೆಂದರೆ ಹುಡುಗರು ಸಾಹಸಪ್ರಿಯರು ಮತ್ತು ಅವರು ಅಸಾಧಾರಣ ತಿನಿಸುಗಳ ಹೊಸ ರುಚಿಯನ್ನು ಸವಿಯಲು ಸದಾ ಸಿದ್ಧರಾಗಿರುತ್ತಾರೆ.

ಅಜ್ಜಿ ಯಾವಾಗ ಹೊಸ ಪಾಕವನ್ನು ತಯಾರಿಸಿದರೂ, ಅದನ್ನು ಮೊದಲು ನನಗೆ ಕೊಟ್ಟು ನನ್ನ ಅಭಿಪ್ರಾಯ ಮತ್ತು ಪ್ರತಿಕ್ರಿಯೆಗಾಗಿ ಕಾದಿರುತ್ತಿದ್ದಳು. ನಂತರ ಅದನ್ನೆಲ್ಲಾ ಒಂದು ಪುಸ್ತಕದಲ್ಲಿ ಬರೆದಿಡುತ್ತಿದ್ದಳು. ಆ ವಿಷಯಗಳು ಅಜ್ಜಿಗೆ ಮತ್ತೊಬ್ಬರ ಮೇಲೆ ಪ್ರಯೋಗಿಸಲು ಉಪಯೋಗಕ್ಕೆ ಬರುತ್ತಿದ್ದವು.

"ನಿನಗೆ ಇಷ್ಟವಾಯಿತೇ?" ನಾನು ನಾಲ್ಕಾರು ತುತ್ತು ತಿಂದ ಬಳಿಕ ಅವಳು ಕೇಳುವಳು.

"ಹೌದಜ್ಜಿ."

"ಸಿಹಿ ಸಾಕೇ?"

"ಸಿಹಿ ಅತಿಯಾಗಿಲ್ಲ ತಾನೆ?"

"ಇಲ್ಲ, ಅಜ್ಜಿ."

"ಇನ್ನೂ ಸ್ವಲ್ಪ ಬೇಕೇ?"

"ಬೇಕು. ಇನ್ನೂ ಸ್ವಲ್ಪ ಹಾಕು ಅಜ್ಜಿ."

"ಒಳ್ಳೇದು ಮೊದಲು ಅದನ್ನ ತಿಂದು ಮುಗಿಸು."

"ಉಮ್‌ಮ್‌ಮ್‌ಮ್...."

ಅಜ್ಜಿ ತಯಾರಿಸುತ್ತಿದ್ದ ವಿಶೇಷ ಪದಾರ್ಥಗಳಲ್ಲಿ ರೋಸ್ಟ್ ಡಕ್ ಒಂದು. ಅಜ್ಜಿಯ ಮನೆಯಲ್ಲಿ ನಾನು ಮೊದಲಸಾರಿ ರೋಸ್ಟ್‌ಡಕ್ ತಿಂದಾಗ, ಅಂಕಲ್ ಕೆನ್ ಸಹ ಅಲ್ಲೇ ಇದ್ದರು. ಅವರು ಆಗತಾನೇ ರೈಲ್ವೆ ಗಾರ್ಡ್ ಕೆಲಸ ಕಳೆದುಕೊಂಡು ನಿರುದ್ಯೋಗಿಯಾಗಿದ್ದರು. ಅವರಿಗೆ ಇನ್ನೊಂದು ಕೆಲಸ ಸಿಗುವವರೆಗೂ ಅಜ್ಜಿ ಜೊತೆ ಇರಲು ಅಲ್ಲಿಗೆ ಬಂದಿದ್ದರು. ಎಷ್ಟು ದಿವಸ ಸಾಧ್ಯವೋ ಅಷ್ಟು ಕಾಲ ಅವರು ಅಲ್ಲಿರುತ್ತಿದ್ದರು. ಅಜ್ಜಿ ಪಡ್ರೆ ದಾಸ್‌ರವರ ಚಿಕ್ಕಮಕ್ಕಳ ಸಂಸ್ಥೆಯಲ್ಲಿ ಅಧ್ಯಾಪಕರ ಕೆಲಸ ಕೊಡಿಸುವುದಾಗಿ ಹೇಳಿದಾಕ್ಷಣ, ಅವರು ಅಲ್ಲಿಂದ ಜಾಗ ಖಾಲಿ ಮಾಡಿದ್ದರು.

ಅಂಕಲ್ ಕೆನ್‌ಗೆ ಚಿಕ್ಕ ಮಕ್ಕಳೆಂದರೆ ಆಗದು. ಮಕ್ಕಳು ಅಂಕಲ್ ಕೆನ್ ಅವರನ್ನು ಹೆದರಿ ನಡುಗುವಂತೆ ಮಾಡುತ್ತಿದ್ದರು. ನಾನೂ ಸಹ ಅವರನ್ನು ಹೆದರಿಸುತ್ತಿದ್ದೆ. ಅಜ್ಜಿ ಯಾವಾಗಲೂ ಅವರ ರಕ್ಷಣೆಗೆ ಬರುತ್ತಿದ್ದಳು. ಪಡ್ರೆ ದಾಸ್‌ರವರಲ್ಲಿ ಅವರನ್ನು ಕಾಡಿಸಲು ನೂರಕ್ಕೂ ಮೇಲ್ಪಟ್ಟು ಸಣ್ಣ ಮಕ್ಕಳಿದ್ದರು. ಮನೆಯಲ್ಲಾದರೋ ನಾನೊಬ್ಬೇ ಇರುತ್ತಿದ್ದೆ. ನಾನು ಎಷ್ಟು ತಿನ್ನುತ್ತಿದ್ದೆನೋ ಅವರೂ ಅಷ್ಟೇ ತಿನ್ನುತ್ತಿದ್ದರು. ಆದರೂ, ಅವರು ಯಾವತ್ತೂ ಅಜ್ಜಿಯ ಅಡಿಗೆಯನ್ನು ಪ್ರಶಂಸಿಸುತ್ತಿರಲಿಲ್ಲ. ಈ ಕಾರಣದಿಂದಲೇ ನನಗೆ, ಅವರ ಮೇಲೆ ಆಗಾಗ್ಗೆ ಕೋಪ ಬರುತ್ತಿತ್ತು. ಅಲ್ಲದೆ ಕೆಲವು ಸಾರಿ ನಾನೂ ಅವರನ್ನು ಸತಾಯಿಸಿ ಆನಂದ ಪಡುತ್ತಿದ್ದೆ.

ಅಂಕಲ್ ಕೆನ್ ರೋಸ್ಟ್ ಡಕ್‌ಅನ್ನು ಬಗ್ಗಿ ನೋಡುತ್ತಿದ್ದಾಗ ಅವರ ಕನ್ನಡಕ ಜಾರಿ ಮೂಗಿನ ತುದಿಗೆ ಇಳಿಯುತ್ತಿತ್ತು.

"ಹುಮ್ ಏನತ್ತೆ, ಪುನಃ ಬಾತುಕೋಳಿಯೇ?"

"ಹಾಗಂದರೇನು, ನೀನು ಹೋದ ತಿಂಗಳು ಇಲ್ಲಿಗೆ ಬಂದಾಗಿನಿಂದ ಬಾತು ಕೋಳಿ ಮಾಡೇ ಇರಲಿಲ್ಲ." "ನಾನು ಹೇಳ್ತಾ ಇರೋದು ಅದೇ," ಎಂದರು ಅಂಕಲ್ ಕೆನ್. "ಅತ್ತೆ ಯಾರೇ ಆಗಲಿ ನಿನ್ನಿಂದ ತರಹಾವರಿ ಅಪೇಕ್ಷಿಸುತ್ತಾರೆ". ಅಂಕಲ್ ಕೆನ್ ತಿನ್ನೋದರಲ್ಲಿ ಏನೂ ಕಡಿಮೆ ಇರಲಿಲ್ಲ. ನಾನು ಬಡಿಸಿಕೊಳ್ಳುವ ಮೊದಲೇ ಅಂಕಲ್ ಕೆನ್ ಎರಡು ಬಾರಿ ಹೆಚ್ಚು ಹೆಚ್ಚಾಗಿ ಬಡಿಸಿಕೊಂಡು, ಮಸಾಲೆ ತುಂಬಿದ ಭಾಗವನ್ನು ತಿಂದು ಮುಗಿಸಿದ್ದರು. ನನಗೇನೂ ಉಳಿಸಿರಲಿಲ್ಲ. ನಾನು ಸೇಬಿನ ಗೊಜ್ಜನ್ನು ಪೂರ್ತಿ

ನನ್ನ ತಟ್ಟೆಗೆ ಸುರಿದುಕೊಂಡು ಅವರ ಮೇಲೆ ಮುಯ್ಯಿ ತೀರಿಸಿಕೊಂಡೆ. ನನಗೆ ಮಸಾಲೆ ತುಂಬಿದ ಮಾಂಸ ಎಂದರೆ ಪ್ರಾಣ ಎಂದು ಅಂಕಲ್‌ಕೆನ್‌ಗೆ ಗೊತ್ತಿತ್ತು. ಅಜ್ಜಿಯ ಸೇಬಿನ ಗೊಜ್ಜೆಂದರೆ ಅವರಿಗೆ ಹುಚ್ಚು ಎಂದು ನನಗೆ ತಿಳಿದಿತ್ತು. ಅಂತೂ ಪೈಪೋಟಿ ಸಮಸಮವಾಗಿ ನಡೆಯುತ್ತಿತ್ತು. "ನೀನು ನಿಮ್ಮ ಅಪ್ಪ ಅಮ್ಮನ ಬಳಿ ಯಾವಾಗ ಹೋಗುತ್ತೀಯಾ?" ಅಂಕಲ್ ಕೆನ್ ಹುಳಿಯಾದ ಜ್ಯಾಮನ್ನು ತಿನ್ನುತ್ತಾ ಆಶಾಜನಕವಾಗಿ ಕೇಳಿದರು.

"ಬಹುಶಃ ನಾನು ಈ ವರುಷ ಅವರ ಹತ್ತಿರ ಹೋಗೋದೇ ಇಲ್ಲ" "ನಿಮಗೆ ಬೇರೊಂದು ಕೆಲಸ ಯಾವಾಗ ಸಿಗುತ್ತೆ? ಅಂಕಲ್", "ಓಹೋ, ನಾನು ಇನ್ನೂ ಒಂದೆರಡು ತಿಂಗಳು ಆರಾಮವಾಗಿ ಇರೋಣವೆಂದು ಯೋಚಿಸುತ್ತಿದ್ದೇನೆ." ಮನೆಯನ್ನು ಸ್ವಚ್ಛಗೊಳಿಸುವ ಕೆಲಸದಲ್ಲಿ ಅಜ್ಜಿ ಮತ್ತು ಮನೆಗೆಲಸದವಳಿಗೆ ಸಹಾಯ ಮಾಡುವುದೆಂದರೆ ನನಗೆ ತುಂಬ ಆನಂದವಾಗುತ್ತಿತ್ತು. ಕೆಲಸ ಮಾಡುತ್ತಿದ್ದಾಗ ಕೆನ್ ಮಾವ ವೆರಾಂಡದಲ್ಲಿ ಸ್ವಲ್ಪ ನಿದ್ರೆ ತೆಗೆಯುತ್ತಿದ್ದರು ಅಥವಾ ನೃತ್ಯಸಂಗೀತವನ್ನು ಕೇಳಲು ರೇಡಿಯೋ ತಿರುಗಿಸುತ್ತಿದ್ದರು.

"ನಿನ್ನ ಅಂಕಲ್ ಕೆನ್ ಬಗ್ಗೆ ನಿನಗೇನನ್ನಿಸುತ್ತೆ?" ಅವರ ತಟ್ಟೆಯಲ್ಲಿದ್ದ ಮೂಳೆಗಳನ್ನು ನಾಯಿಯ ಪಾತ್ರೆಗೆ ಹಾಕುತ್ತ ಒಂದು ದಿನ ಅಜ್ಜಿ ಕೇಳಿದಳು.

"ಅವರು ನನಗಿಂತಲೂ ಬೇರೆ ಯಾರಿಗಾದರೂ ಮಾವನಾಗಿದ್ದರೆ ಚೆನ್ನಾಗಿರುತ್ತಿತ್ತು" ಎಂದೆ ನಾನು.

"ನಿಜವಾಗಿಯೂ ಅವನು ಅಷ್ಟೇನೂ ಕೆಟ್ಟವನಲ್ಲ. ಆದರೆ ಸ್ವಲ್ಪ ವಿಚಿತ್ರ, ಅಷ್ಟೇ."

"ಏನು ವಿಚಿತ್ರ ಅಂದರೆ?"

"ಓಹೋ, ಒಂದು ತರಹ ಉನ್ಮತ್ತ."

"ಕಡೇ ಪಕ್ಷ ಕ್ರೇಸಿ ಮನೆಯನ್ನಾದರೂ ಸುತ್ತು ಹಾಕುತ್ತೆ," ನಾನೆಂದೆ.

"ಅಂಕಲ್ ಕೆನ್ ಓಡೋದನ್ನಂತೂ ನಾನು ನೋಡೇ ಇಲ್ಲ."

ಅಂತೂ, ಒಂದು ದಿನ ಆ ದೃಶ್ಯವನ್ನು ನಾನು ನೋಡಿಯೇ ನೋಡಿದೆ. ನಾನು ಮತ್ತು ಮೋಹನ್ ಮಾವಿನ ತೋಪಿನ ನೆರಳಿನಲ್ಲಿ ಗೋಲಿ ಆಡುತ್ತಿದ್ದೆವು. ಆಗ ನಾವು ಕೆನ್ ಅಂಕಲ್ ಕಾಂಪೌಂಡ್ ದಾಟಿಕೊಂಡು ಓಡುತ್ತಿರುವುದನ್ನು ಕಂಡೆವು. ಅವರ ಹಿಂದೆ ಜೇನು ನೊಣಗಳ ಗುಂಪು ಅಟ್ಟಿಸಿಕೊಂಡು ಹೊಗುತ್ತಿದ್ದುದನ್ನು ನೋಡಿ ನಾವು ದಿಗ್ಭ್ರಮೆಗೊಂಡೆವು. ಬಹುಶಃ ಅವರು ಸೈಮಲ್ ಮರದ ಕೆಳಗೆ ಚುಟ್ಟ ಸೇದುತ್ತಾ ಕುಳಿತಿದ್ದಾಗ ಅವರ ಮೇಲಿದ್ದ ಜೇನುಗೂಡಿಗೆ ಅದರ ಹೊಗೆ ತುಂಬಿ ಜೇನು ನೊಣಗಳು ರೇಗಿರಬೇಕು. ಕೆನ್ಮಾವ ಒಳಗೆ ಓಡಿ ಹೋಗಿ ತಣ್ಣನೆ ನೀರಿನ ತೊಟ್ಟಿಗೆ ಧುಮುಕಿದ್ದರು. ಅವರಿಗೆ ಸಾಕಷ್ಟು ಜೇನು ಹುಳುಗಳು ಕಡಿದು ಮೈಕೈ ಊತ ಬಂದಿತ್ತು. ಅವರು ಮೂರು ದಿವಸ ಹಾಸಿಗೆ ಮೇಲೆ ವಿಶ್ರಾಂತಿ ಪಡೆಯಲು ನಿಶ್ಚಯಿಸಿದರು. ದಾಯಿ ಊಟವನ್ನು ಅವರಿಗೆ ಅಲ್ಲೇ ಕೊಟ್ಟುಬರುತ್ತಿದ್ದಳು. "ಅಂಕಲ್ ಅಷ್ಟು ಜೊರಾಗಿ ಓಡಬಲ್ಲರೆಂದು, ನನಗೆ ಆ ದಿನದವರೆಗೂ ಗೊತ್ತಿರಲಿಲ್ಲ" ಎಂದೆ ನಾನು.

"ನಷ್ಟ ತುಂಬುವುದು ಪ್ರಕೃತಿಯ ರೀತಿ", ಎಂದೆ ನಾನು.

"ನಷ್ಟ ತುಂಬಿಕೊಡುವುದು ಎಂದರೇನು?"

"ಯಾವುದಾದರೂ ಕೊರತೆಯನ್ನು ಪೂರೈಸುವುದು... ಸಧ್ಯ, ಕೆನ್ ಅಂಕಲ್‌ಗೆ ತಾನು ಓಡಬಲ್ಲೆನೆಂಬುದು ಅರಿವಾಯಿತು. ಅದೂ ಒಂದು ಅದ್ಭುತ ವಿಷಯವಲ್ಲವೇ?"



# ಅಜ್ಜಿಯ ಕೈ ಉಪ್ಪಿನಕಾಯಿ

ವೆನಿಲ್ಲಾ ಮತ್ತು ಚಾಕ್‌ಲೇಟ್ ಬರ್ಫಿ ಮಾಡಿದಾಗಲೆಲ್ಲಾ ಅಜ್ಜಿ ಮಾಲಿ ಮಗ ಮೋಹನನಿಗೆ ಸ್ವಲ್ಪ ಕೊಡುತ್ತಿದ್ದಳು. ಅದನ್ನು ನಾನೇ ಅವನಿಗೆ ಕೊಟ್ಟು ಬರುತ್ತಿದ್ದೆ. ರೋಸ್ಟ್ ಡಕ್ ಅಥವಾ ಚಿಕನ್ ಕರ್ರಿ ಅವನಿಗೆ ತೆಗೆದುಕೊಂಡು ಹೋಗಿ ಕೊಡುವುದರಿಂದ ಏನೂ ಉಪಯೋಗವಿರಲಿಲ್ಲ. ಯಾಕೆಂದರೆ ಅವರ ಮನೆಯಲ್ಲಿ ಯಾರೂ ಮಾಂಸ ತಿನ್ನುತ್ತಿರಲಿಲ್ಲ.

ಆದರೆ ಮೋಹನನಿಗೆ ಸಿಹಿ ತಿಂಡಿ ಎಂದರೆ ತುಂಬ ಇಷ್ಟ. ಹೆಚ್ಚು ಹಾಲು ಮತ್ತು ಸಕ್ಕರೆ ಹಾಕಿ ಮಾಡುತ್ತಿದ್ದ ಗುಲಾಬ್ ಜಾಮೂನು, ರಸಗುಲ್ಲ, ಜಿಲೇಬಿ, ಅಲ್ಲದೆ ಅವನು ಅಜ್ಜಿ ಮನೆಯಲ್ಲಿ ಮಾಡಿದ ಇಂಗ್ಲೀಷ್ ಸಿಹಿತಿಂಡಿಗಳನ್ನು ಸಹ ತುಂಬ ಇಷ್ಟಪಡುತ್ತಿದ್ದ. ನಾವುಗಳು ಹಲಸಿನ ಮರದ ಕೊಂಬೆಗಳ ಮೇಲೆ ಹತ್ತಿ ಕುಳಿತು ಅಲ್ಲಿ ಚಾಕ್‌ಲೇಟ್ ಬರ್ಫಿಯನ್ನೋ ಪೆಪ್ಪರ್‌ಮೆಂಟ್‌ನೋ ಅಥವಾ ಅಂಟು ಅಂಟಾದ ಪಾಕಂಪಪ್ಪನ್ನೋ ತಿನ್ನುತ್ತಿದ್ದೆವು. ನಾವು ಹಲಸಿನಕಾಯಿ ಪಲ್ಯ ಅಥವಾ ಅದರ ಉಪ್ಪಿನಕಾಯಿ ಬಿಟ್ಟು ಅದರ ಹಣ್ಣನ್ನು ತಿಂದೇ ಇಲ್ಲ. ಆದರೆ ಆ ಮರ ಮಾತ್ರ ಹತ್ತಲು ಅದ್ಭುತವಾಗಿತ್ತು. ಅಲ್ಲಿ ಕೆಲವು ಆಶ್ಚರ್ಯಕರವಾದ ಜೀವಿಗಳು ವಾಸಿಸುತ್ತಿದ್ದವು – ಅಳಿಲುಗಳು, ಹಣ್ಣು ತಿನ್ನುವ ಕಪಟಗಳು ಮತ್ತು ಒಂದು ಜೋಡಿ ಹಸಿರು ಗಿಳಿಗಳು. ಅಳಿಲುಗಳು ಬಹು ಬೇಗ ನಮಗೆ ಸ್ನೇಹಿತರಾಗಿ, ನಮ್ಮ ಕೈನಲ್ಲಿ ತಿಂಡಿ ತಿನ್ನುವ ಅಭ್ಯಾಸ ಮಾಡಿಕೊಂಡವು. ಅವುಗಳಿಗೂ ಅಜ್ಜಿಯ ಚಾಕ್‌ಲೇಟ್ ಬರ್ಫಿ ಎಂದರೆ ಬಹಳ ಇಷ್ಟವಾಗುತ್ತಿತ್ತು. ಒಂದು ಮರಿ ಅಳಿಲಂತೂ ಅದಕ್ಕೇನಾದರೂ ತಿಂಡಿ ಇಟ್ಟುಕೊಂಡಿದ್ದೀನೇನೋ ಎಂದು ನನ್ನ ಜೇಬನ್ನು ಹುಡುಕಾಡುತ್ತಿತ್ತು. ಮೋಹನ್ ಮತ್ತು ನಾನು ತೋಟದಲ್ಲಿ ಯಾವುದೇ ಮರವಾದರೂ ಅದನ್ನು ಏರಿಬಿಡುತ್ತಿದ್ದೆವು. ಅಜ್ಜಿ ನಮ್ಮನ್ನು ಹುಡುಕಬೇಕಾದರೆ ವೆರಾಂಡದ ಮುಂದಿನಿಂದಲೋ ಅಥವಾ ಮನೆ ಪಕ್ಕದ ಉಗ್ರಾಣದಿಂದಲೋ ಅಥವಾ ಮನೆಯ ಇನ್ನೊಂದು ಪಕ್ಕದಲ್ಲಿದ್ದ ಬಚ್ಚಲು ಮನೆಯ ಕಿಟಕಿಯಿಂದಲೋ ಕೂಗಿ ಕರೆಯುತ್ತಿದ್ದಳು.

ಸುತ್ತ ಮುತ್ತಲೂ ತುಂಬಾ ಮರಗಳಿದ್ದ ಕಾರಣ ನಾವು ಜವಾಬು ಕೊಡುವವರೆಗೆ ಯಾವ ಮರದ ಮೇಲಿದ್ದೇವೆಂದು ಗೊತ್ತಾಗುತ್ತಿರಲಿಲ್ಲ. ಕೆಲವು ಸಾರಿ ಕ್ರೇಸಿ ನಾವಿದ್ದ ಮರದ ಕೆಳಗೆ ನಿಂತು ಬೊಗಳಿ ನಾವು ಆ ಮರದ ಮೇಲೆ ಇದ್ದೇವೆಂದು ಸೂಚನೆ ಕೊಟ್ಟು ಬಿಡುತ್ತಿತ್ತು.

ಹಣ್ಣು ಕೀಳುವ ಸಮಯ ಬಂದಾಗ ಮೋಹನ್ ಹಣ್ಣು ಕೀಳುತ್ತಿದ್ದ. ಮಾವು ಮತ್ತು ಲೀಚಿ ಬೇಸಿಗೆಯಲ್ಲಿ ಬಿಡುವ ಹಣ್ಣುಗಳಾದ್ದರಿಂದ ನಾನು ಆ ಸಮಯದಲ್ಲಿ ಬೋರ್ಡಿಂಗ್ ಸ್ಕೂಲ್‌ನಲ್ಲಿ ಇರುತ್ತಿದ್ದೆ. ಆದ್ದರಿಂದ ಹಣ್ಣು ಶೇಖರಿಸುವುದರಲ್ಲಿ ನಾನು ಸಹಾಯ ಮಾಡಲಾಗುತ್ತಿರಲಿಲ್ಲ. ಪರಂಗಿ ಹಣ್ಣುಗಳು ಚಳಿಗಾಲದಲ್ಲಿ ಬಿಡುತ್ತವೆ. ಪರಂಗಿ ಮರ ಸಣ್ಣಗಿದ್ದು ಮುಟ್ಟಿದರೆ ಮುರಿದು ಬೀಳುವ ಕಾರಣ ಯಾರೂ ಮರವನ್ನು ಹತ್ತುತ್ತಿರಲಿಲ್ಲ. ಒಂದು ದೊಡ್ಡ ಗಳುವಿನ ತುದಿಗೆ ಕೊಕ್ಕೆ ಸಿಕ್ಕಿಸಿ ಪರಂಗಿ ಹಣ್ಣಿಗೆ ಹಾಕಿ ಜಗ್ಗಿಸಿದಾಗ ಅದು ನೆಲಕ್ಕೆ ಬೀಳುವ ಮುನ್ನ ಕೈಯ್ಯಲ್ಲಿ ಹಿಡಿಯುತ್ತಿದ್ದೆವು.

ಉಪ್ಪಿನಕಾಯಿ ಹಾಕುವಾಗಲೂ ಮೋಹನ್, ಅಜ್ಜಿಗೆ ಸಹಾಯ ಮಾಡುತ್ತಿದ್ದ. ಅಜ್ಜಿ, ತನ್ನ ಉಪ್ಪಿನ ಕಾಯಿಗಳಿಗೆ ಹೆಸರುವಾಸಿಯಾಗಿದ್ದಳು. ಹಸಿರು ಮಾವಿನ ಕಾಯಿಯ ಎಣ್ಣೆ ಉಪ್ಪಿನಕಾಯಿ ಯಾವಾಗಲೂ ಪ್ರಿಯವಾಗಿತ್ತು. ಅಂತೆಯೇ ಅವಳ ಬಿಸಿ ನಿಂಬೇ ಉಪ್ಪಿನಕಾಯಿ ಹಾಕಬಲ್ಲವಳಾಗಿದ್ದಳು. ಕೆನ್ ಮಾವನಿಗೆ ಉಪ್ಪಿನಕಾಯಲ್ಲಿ ಅಷ್ಟು ಆಸಕ್ತಿ ಇರಲಿಲ್ಲ. ಆದ್ದರಿಂದ ನಾನು, ಯಾವಾಗಲೂ, ಅಂಕಲ್ ಕೆನ್‌ಗೆ ಹೆಚ್ಚು ಹೆಚ್ಚು ಉಪ್ಪಿನಕಾಯಿ ಹಾಕಲು ಅಜ್ಜಿಯನ್ನು ಒತ್ತಾಯ ಪಡಿಸುತ್ತಿದ್ದೆ. ನನ್ನ ಒಲವು ಸಿಹಿಚಟ್ನಿ ಮತ್ತು ಗೊಜ್ಜುಗಳ ಕಡೆಗೇ ಇದ್ದರೂ ನಾನು ಉಪ್ಪಿನಕಾಯಿಯನ್ನೂ ತಿನ್ನುತ್ತಿದ್ದೆ. ತುಂಬಾ ಖಾರವಾಗಿದ್ದರೂ ಸಹ. ಒಂದು ಚಳಿಗಾಲದಲ್ಲಿ ಅಜ್ಜಿ ಕೈಯಲ್ಲಿ ಹಣ ಕಮ್ಮಿ ಇತ್ತು. ನಾನು ಮತ್ತು ಮೋಹನ್, ಮನೆಮನೆಗೆ ಹೋಗಿ ಉಪ್ಪಿನಕಾಯಿ ಮಾರಿ, ಅವಳಿಗೆ ಹಣ ತಂದು ಕೊಡುತ್ತಿದ್ದೆವು. ಅಜ್ಜಿ ಎಷ್ಟೊಂದು ಜನ ಮತ್ತು ಪ್ರಾಣಿಗಳನ್ನು ಸಾಕುತ್ತಿದ್ದಳು. ಆದರೂ ಅವಳು ಶ್ರೀಮಂತಳೇನಿರಲಿಲ್ಲ. ಆ ಮನೆ ಅವಳಿಗೆ ಅಜ್ಜನಿಂದ ಬಂದಿತ್ತು. ಬ್ಯಾಂಕಿನಲ್ಲಿ ಹೆಚ್ಚು ಹಣವೇನೂ ಇರಲಿಲ್ಲ. ಮಾವಿನ ಬೆಳೆಯಿಂದ ಪ್ರತಿವರ್ಷ ಸುಮಾರು ಹಣ ಬರುತ್ತಿತ್ತು ಮತ್ತು ರೈಲ್ವೇ ಇಲಾಖೆಯಿಂದ ಸ್ವಲ್ಪ ಪಿಂಚಣಿ ಬರುತ್ತಿತ್ತು. ಅಜ್ಜ ಡೆಹರಾಗೆ ರೈಲ್ವೆ ಮಾರ್ಗ ತಂದ ಆ ಶತಮಾನದ ಅಂತ್ಯದ ಮುಂದಾಳುಗಳಲ್ಲಿ ಒಬ್ಬರಾಗಿದ್ದರು. ಅಜ್ಜಿಗೆ ಬೇರೆ ಯಾವ ಆದಾಯವೂ ಇರಲಿಲ್ಲ. ಅಡಂಬರವಿಲ್ಲದ ಅಜ್ಜಿಯ ಆ ಅಡಿಗೆಯಿಂದ ನನಗೆ ರಸದೌತಣದ ಆನಂದವೇ ದೊರೆಯುತ್ತಿತ್ತು. ಈಗಲೂ ನಾನು ಅದನ್ನು ನೆನೆಸಿಕೊಳ್ಳುತ್ತೇನೆ. ಅಜ್ಜಿಗೋಸ್ಕರ ಉಪ್ಪಿನಕಾಯಿ ಮಾರುವಾಗ ನನಗೇನೂ ನಾಚಿಕೆ ಆಗುತ್ತಿರಲಿಲ್ಲ. ಆ ಕೆಲಸವನ್ನು ನಾನು ಖುಷಿಯಾಗಿಯೇ ಮಾಡುತ್ತಿದ್ದೆ. ಮೋಹನ್ ಮತ್ತು ನಾನು ಉಪ್ಪಿನಕಾಯಿ ಶೀಷೆಗಳಿಂದ ತುಂಬಿದ ಬುಟ್ಟಿಯನ್ನು ತೋಳಿಗೆ ತಗುಲಿಹಾಕಿ ಕೊಂಡು ನಮ್ಮ ಬಡಾವಣೆಯಲ್ಲಿದ್ದ ಎಲ್ಲಾ ಮನೆಗಳಿಗೂ ಮಾರಲು ಹೋಗುತ್ತಿದ್ದೆವು. ನಮ್ಮ ಮೊದಲ ಗಿರಾಕಿ ಆಚೆ ಬದಿಯ ಮೇಜರ್ ಕ್ಲಾರ್ಕ್. ಅವರಿಗೆ ಕೆಂಚ ಕೂದಲು

ಮತ್ತು ಹೊಳೆಯುವ ನೀಲಿ ಕಣ್ಣುಗಳಿದ್ದುವು. ಅವರ ಮಾತಿನಲ್ಲಿ ಯಾವಾಗಲೂ ಹಾಸ್ಯವಿರುತ್ತಿತ್ತು.

"ಮತ್ತೇನಿದೆ ರಸ್ಟಿ, ಅದರಲ್ಲಿ?" ಅವರು ಕೇಳಿದರು.

"ಉಪ್ಪಿನಕಾಯಿ, ಸರ್".

"ಉಪ್ಪಿನಕಾಯಿ! ನೀನು ಹಾಕಿದ್ದೇನು?"

"ಇಲ್ಲ, ಸರ್ ಅವು ನಮ್ಮಜ್ಜೀದು. ನಾವು ಅದನ್ನು ಮಾರುತ್ತಿದ್ದೇವೆ, ಅದರಿಂದ ಕ್ರಿಸ್‌ಮಸ್‌ಗೆ ಒಂದು ಟರ್ಕಿ ಕೊಳ್ಳೋಣ ಎಂದು."

ಶ್ರೀಮತಿ ಬಾಂಡ್ ಹಾಕಿದ ಉಪ್ಪಿನಕಾಯಿಗಳು, ಎಹ್? ರಸ್ತೆಯ ಮೊದಲ ಮನೆ ನನ್ನದೇ ಆಗಿರೋದು ನನಗೆ ಲಾಭ, ಏಕೆಂದರೆ ನನಗೆ ಖಂಡಿತ ಗೊತ್ತು ಬುಟ್ಟಿ ಬೇಗ ಖಾಲಿ ಆಗಿಬಿಡುತ್ತೇಂತ. ನಿಮ್ಮಜ್ಜಿಯಂತೆ ಉಪ್ಪಿನಕಾಯಿ ಹಾಕುವವರು ಯಾರೂ ಇಲ್ಲ. ಮಗು, ನಾನು ಮುಂಚೇನೂ ಹೇಳ್ತಿದ್ದೆ. ಈಗಲೂ ಹೇಳ್ತೇನೆ – ಒಳ್ಳೆ ಅಡಿಗೆಯವರೇ ಇಲ್ಲದ ಈ ಪ್ರಪಂಚದಲ್ಲಿ ಆಕೆ ದೇವರ ಒಂದು ವರವಿದ್ದಂತೆ. ನನ್ನ ಹೆಂಡತಿ ಅಂಗಡಿಗೆ ಹೋಗಿರುವುದರಿಂದ, ನಾನು ನಿಸ್ಸಂಕೋಚವಾಗಿ ಮಾತಾಡಬಹುದು. ನೋಡಪ್ಪ ನೀನು... ಈ ಸಾರಿ ಏನೇನು ತಂದಿದ್ದೀ? ಮಸಾಲೆ ತುಂಬಿದ ಮೆಣಸಿನಕಾಯಿ, ಇರಬೇಕಲ್ಲ. ಅದು ನನ್ನ ಪ್ರಿಯವಾದದ್ದೆಂದು ಅವಳಿಗೆ ಗೊತ್ತು. ಆ ಬುಟ್ಟೀಲಿ, ಮಸಾಲೆ ತುಂಬಿದ ಮೆಣಸಿನಕಾಯಿಗಳಿಲ್ಲದಿದ್ದರೆ ನನ್ನ ಮನಸ್ಸಿಗೆ ಅಪಾರ ನೋವುಂಟಾಗುತ್ತೆ."

ವಾಸ್ತವವಾಗಿ ಮಸಾಲೆ ತುಂಬಿದ ಮೆಣಸಿನಕಾಯಿಯ ಮೂರು ಬಾಟಲ್‌ಗಳಿದ್ದುವು. ಮೇಜರ್ ಕ್ಲಾರ್ಕ್ ಎಲ್ಲವನ್ನು ಕೊಂಡುಕೊಂಡರು. ಆದ್ದರಿಂದ ನಾವು ಮಿಸ್ ಕೆಲ್ನರ್ ಮನೆಗೆ ಹೋದೆವು. ಕೆಲ್ನರ್ ಖಾರದ ಪದಾರ್ಥ ತಿನ್ನುವಂತಿರಲಿಲ್ಲ. ಆದ್ದರಿಂದ ಆಕೆಗೆ ಉಪ್ಪಿನಕಾಯಿ ಏನೂ ಉಪಯೋಗವಿರಲಿಲ್ಲ. ಆದರೆ ಅವಳು ಸಂರಕ್ಷಿತ ಶುಂಠಿಯ ಒಂದು ಬಾಟಲ್ ಕೊಂಡುಕೊಂಡು ಒಂದು ಪುಟ್ಟ ಪ್ರಾರ್ಥನೆ ಪುಸ್ತಕ ನನಗೆ ಕೊಟ್ಟಳು. ಅವಳನ್ನು ನಾನು ನೋಡಲು ಹೋದಾಗೆಲ್ಲಾ ಅವಳು ನನಗೆ ಒಂದು ಪ್ರಾರ್ಥನೆ ಪುಸ್ತಕ ಕೊಡುತ್ತಿದ್ದಳು. ಅವಳು ಕೊಡುತ್ತಿದ್ದ ಪುಸ್ತಕ ಯಾವಾಗಲೂ ಒಂದೇ ಆಗಿರುತ್ತಿತ್ತು. ಮುಂದೆ ರಸ್ತೆಯ ಕೆಳಗಿನಲ್ಲಿ ಆಸ್ಪತ್ರೆಯ ಮುಖ್ಯಾಧಿಕಾರಿಯಾಗಿದ್ದ ಡಾ. ದತ್-ಇದ್ದರು ಪಿತ್ತಕ್ಕೆ ಒಳ್ಳೆಯದೆಂದು ಅವರು ಅನೇಕ ನಿಂಬೆಕಾಯಿ ಉಪ್ಪಿನಕಾಯಿ ಶೀಸೆಗಳನ್ನು ಕೊಂಡುಕೊಂಡರು. ಇನ್ನು ಶ್ರೀಮಾನ್ ಹರಿ, ರಸ್ತೆ ಕೊನೆಯಲ್ಲಿದ್ದ ಗ್ಯಾರೇಜಿನ ಮಾಲೀಕರು. ಅವರು ಎಲ್ಲಾ ಹೊಸಮಾದರಿಯ ಕಾರುಗಳನ್ನು ಮಾರುತ್ತಿದ್ದರು. ಅವರು ಎರಡು ಶೀಸೆ ಈರುಳ್ಳಿ ಉಪ್ಪಿನಕಾಯಿ ಕೊಂಡುಕೊಂಡು ಮುಂದಿನ ತಿಂಗಳು ಮತ್ತೆರಡು ಬೇಕೆಂದು ಕೇಳಿದರು. ನಾವು ಮನೆಗೆ ಹಿಂದಿರುಗುವ ಹೊತ್ತಿಗೆ ಸಾಮಾನ್ಯವಾಗಿ ನಮ್ಮ ಬುಟ್ಟಿ ಖಾಲಿಯಾಗಿರುತ್ತಿತ್ತು. ಅಜ್ಜಿ 20-30 ರೂಪಾಯಿಗಳುಳ್ಳ ಶ್ರೀಮಂತಳಾಗಿರುತ್ತಿದ್ದಳು. ಆಗಿನ ಕಾಲದಲ್ಲಿ, ಒಂದು ಟರ್ಕಿಗೆ ಇಷ್ಟು ಹಣ ಸಾಕಾಗುತ್ತಿತ್ತು. ಅಂಕಲ್ ಕೆನ್ ಕ್ರಿಸ್‌ಮಸ್‌ವರೆಗೂ ಇರುತ್ತಿದ್ದರು ಮತ್ತು ಆಗ ಅವರು ಮುಕ್ಕಾಲು ಭಾಗ ಟರ್ಕಿ ಕಬಳಿಸುತ್ತಿದ್ದರು.

"ನೀನು ಯಾವುದಾದರೂ ನೌಕರಿ ಹುಡುಕು. ಈಗಾಗಲೇ ವೇಳೆ ಮೀರಿದೆ." ಎಂದು ಅಜ್ಜಿ ಒಂದು ದಿವಸ ಕೆನ್ ಮಾವನಿಗೆ ಹೇಳಿದಳು.

"ಡೆಹ್ರಾದಲ್ಲಿ ಕೆಲಸ ಇದ್ದರಲ್ಲವೇ" ಎಂದು ದೂರುವ ಧ್ವನಿಯಲ್ಲಿ ಹೇಳಿದರು ಕೆನ್ ಅಂಕಲ್.

"ಹೇಗೆ ಹೇಳುತ್ತಿ?" ನೀನು ಹುಡುಕುವ ಗೋಜಿಗೆ ಹೋಗಿದ್ದರಲ್ಲವೆ, ಅದೂ ಅಲ್ಲದೆ ನೀನಿಲ್ಲೇ ತಳ ಊರಬೇಕಾಗಿಲ್ಲ. ನಿನ್ನ ಅಕ್ಕ ಎಮಿಲಿ, ಲಕ್ನೋದಲ್ಲಿ ಒಂದು ಶಾಲೆಯ ಮುಖ್ಯೋಪಾಧ್ಯಾಯಿನಿ ಆಗಿದ್ದಾಳೆ. ನೀನು ಅವಳಲ್ಲಿಗೆ ಹೋಗಬಹುದು, ಅವಳು ಹಿಂದೆ, ನಿನ್ನನ್ನು ಆ ಶಾಲೆಯ ಮೇಲ್ವಿಚಾರಕನನ್ನಾಗಿ ನೇಮಿಸುವುದಾಗಿ ಹೇಳಿದ್ದಳು."

ಕೆನ್ ಅಂಕಲ್ ಹೇಳಿದರು, "ಅತ್ತೆ, 40-50 ಮಂದ ಬುದ್ಧಿಯ ಮಕ್ಕಳಿಂದ ತಳಮಳಿಸುವ ಶಾಲೆಯನ್ನು ನಾನು ನೋಡಿಕೊಳ್ಳುವೆನೆಂದು ಖಂಡಿತ ನಿರೀಕ್ಷಿಸುವುದು ಬೇಡ." ಎಂದರು.

"ಮಂದ ಬುದ್ಧಿಯವು ಅಂದ್ರೆ?" ನಾನು ಕೇಳಿದೆ.

"ಮುಚ್ಚು ಬಾಯಿ," ಕೆನ್ ಅಂಕಲ್ ಅಂದರು.

"ಹಾಗಂದ್ರೆ ಹುಚ್ಚು ಮುಂಡೇವು ಅಂತ" ಅಜ್ಜಿ ಹೇಳಿದಳು.

"ವಿಚಿತ್ರ ಅನ್ನೋಕೆ ಎಷ್ಟೊಂದು ಶಬ್ದಗಳು" ನಾನು ಆಕ್ಷೇಪಿಸಿದೆ.

"ನಾವ್ಯಾಕೆ ವಿಚಿತ್ರ ಅಂತ ಅಷ್ಟೇ ಹೇಳಬಾರದು. ನಮ್ಮ ಹತ್ತಿರ ಒಂದು ವಿಚಿತ್ರ ನಾಯಿ ಇದೆ. ವಿಚಿತ್ರವಾಗಿ ಆಡುವ ಕೆನ್ ಅಂಕಲ್ ಕೂಡಾ ಇದ್ದಾರೆ" ಕೆನ್ ಅಂಕಲ್ ನನ್ನ ಕಿವಿ ತಿರುಚಿದರು, ಅಜ್ಜಿ ಅಂದಳು: "ನಿನ್ನ ಅಂಕಲ್ ವಿಚಿತ್ರ ಅಲ್ಲ. ಅವನಿಗೆ ಅವಮರ್ಯಾದೆ ಮಾಡಬೇಡ. ಅವನು ಸ್ವಲ್ಪ ಸೋಮಾರಿ ಅಷ್ಟೇ."

"ಮತ್ತು ಹುಚ್ಚು" ನಾನೆಂದೆ. "ಅವರು ಹುಚ್ಚರೆಂದು ನಾನು ಕೇಳಿದ್ದೆ."

"ಯಾರು ಹೇಳಿದರು ನಾನು ಹುಚ್ಚ ಅಂತ?" ಕೆನ್ ಮಾವ ದಬಾಯಿಸಿದರು.

"ಕುಮಾರಿ ಲೆಸ್ಲಿ" ನಾನು ಬುರುಡೆ ಬಿಟ್ಟೆ. ಡೆಹ್ರಾದ ಸುಂದರ ವ್ಯಾಪಾರ ಸ್ಥಳದಲ್ಲಿ ಒಂದು ಸೌಂದರ್ಯ ಪ್ರಸಾಧನದ ಅಂಗಡಿ ಇಟ್ಟಿದ್ದ ಮಿಸ್ ಲೆಸ್ಲಿ ಎಂದರೆ ಕೆನ್ ಅಂಕಲ್‌ಗೆ ತುಂಬಾ ಪ್ರೀತಿ ಎಂದು ನನಗೆ ಗೊತ್ತಿತ್ತು.

"ನಾನು ನಿನ್ನನ್ನು ನಂಬೋಲ್ಲ" ಕೆನ್ ಅಂಕಲ್ ಹೇಳಿದರು.

"ಅಂದ್ಹಾಗೆ ನೀನು ಮಿಸ್ ಲೆಸ್ಲೀನ ಯಾವಾಗ ನೋಡಿದ್ದೆ?"

"ಹೋದವಾರ, ನಾವು ಅವಳಿಗೆ ಒಂದು ಶೀಸೆ ಪುದೀನ ಚಟ್ನಿ ಮಾರಿದ್ದೆವು. ಪುದೀನಾ ಚಟ್ನಿ ಎಂದರೆ ನಿಮಗೆ ತುಂಬ ಇಷ್ಟ ಎಂದು ನಾನು ಅವಳಿಗೆ ಹೇಳಿದೆ. ಆದರೆ ಇದನ್ನು ನಾನು ಕೊಂಡಿದ್ದು ಮಿ. ಹಟನ್‌ಗಾಗಿ, ಅವರು ನಾಳೆ ನನ್ನನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ – ಎಂದಳು ಮಿಸ್ ಲೆಸ್ಲಿ" ಎಂದೆ ನಾನು.

# ಸೋಮಾರಿ ಅಂಕಲ್ ಕೆನ್

ನಮ್ಮ ವಿಸ್ಮಯಕ್ಕೆ ಕೆನ್ ಅಂಕಲ್‌ಗೆ ಡೆಹ್ರಾ ಸುತ್ತ ಮುತ್ತಲಿನ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸುವ ಗೈಡ್ ಆಗಿ ಪಾರ್ಟ್ ಟೈಂ ಕೆಲಸ ಸಿಕ್ಕಿತು.

ನದಿಯ ದಡದಲ್ಲಿ ಒಂದು ಕೋಟೆಯಿತ್ತು; ಮತ್ತು 16ನೆಯ ಶತಮಾನದ ಒಂದು ಹಿಂದೂ ದೇವಾಲಯವಿತ್ತು; ಅಲ್ಲದೆ ಹತ್ತು ಮೈಲಿ ದೂರ ಪರ್ವತದ ಬುಡದಲ್ಲಿ ಗಂಧಕದ ಬಿಸಿ ನೀರಿನ ಚಿಲುಮೆ ಇತ್ತು.

ಅಮೆರಿಕದ ಆರು ಜೋಡಿ ಪ್ರವಾಸಿ ದಂಪತಿಗಳನ್ನು ಗಂಧಕದ ಚಿಲುಮೆಗೆ ತಾವು ಕರೆದುಕೊಂಡು ಹೋಗುವುದಾಗಿ ಕೆನ್ ಅಂಕಲ್ ಹೇಳಿದರು. ಅಜ್ಜಿಗೆ ಆಗ ತುಂಬಾ ಸಂತೋಷವಾಯಿತು. ಕೆನ್ ಮಾವ ಕೊನೆಗೂ ವ್ಯಸ್ತರಾದರಲ್ಲ! ಅವಳು ಒಂದು ದಿವಸದ ವಿಹಾರಕ್ಕೆ ಬೇಕಾದಷ್ಟು ಹ್ಯಾಮ್‌ಸ್ಯಾಂಡ್‌ವಿಚ್ಚನ್ನೂ, ಮನೆಯಲ್ಲಿ ಮಾಡಿದ ಬಿಸ್ಕತ್‌ಗಳನ್ನೂ ಮತ್ತು ಒಂದು ಡಜನ್ ಕಿತ್ತಳೆಹಣ್ಣುಗಳನ್ನೂ ಕಟ್ಟಿ ಕೊಟ್ಟಳು. ಗಂಧಕದ ಚಿಲುಮೆ ಡೆಹ್ರಾದಿಂದ ಕೇವಲ ಹತ್ತು ಮೈಲಿಗಳ ದೂರದಲ್ಲಿತ್ತು. ಆದರೆ ನಾವು ಕೆನ್ ಅಂಕಲ್ ಅನ್ನು ಮೂರು ದಿನಗಳವರೆಗೆ ನೋಡಲಿಲ್ಲ. ಅವರು ವಾಪಸ್ ಬಂದಾಗ ನೋಡಬೇಕಾಗಿತ್ತು. ಅವರ ಬಟ್ಟೆಗಳು ಕೊಳೆಯಾಗಿ ಹರಿದು ಹೋಗಿದ್ದವು. ಅವರ ಕೆನ್ನೆ ಎಲ್ಲಾ ಒಳಕ್ಕೆ ಹೋಗಿತ್ತು; ನೆತ್ತಿ ಮೇಲಿನ ಬೋಳು ಭಾಗ ಸುಟ್ಟು ಕೆಂಪಗೆ ಹೊಳೆಯುತ್ತಿತ್ತು.

"ಇದೇನು ನಿಂದು ಅವತಾರ?" ಅಜ್ಜಿ ಕೇಳಿದಳು.

ಕೆನ್ ಮಾವ ವೆರಾಂಡದಲ್ಲಿದ್ದ ಆರಾಮ ಕುರ್ಚಿಯಲ್ಲಿ ಕುಸಿದರು. "ನಾನು ಹೊಟ್ಟೆಗಿಲ್ಲದೆ ಸಾಯ್ತಾ ಇದ್ದೇನೆ. ಅತ್ತೆ, ನನಗೆ ಏನಾದರೂ ತಿನ್ನೋಕೆ ಕೊಡು."

"ನಿನ್ನೊಡನೆ ತೆಗೆದುಕೊಂಡು ಹೋದ ಊಟ ತಿಂಡಿ ಏನಾಯಿತು?"

"ನಾವು ಏಳು ಜನ ಇದ್ದೆವು. ಮೊದಲನೇ ದಿವಸವೇ ಎಲ್ಲಾ ಮುಗಿದು ಹೋಯಿತು."

"ನಿಜ, ಅದು ಒಂದು ದಿವಸಕ್ಕೆ ಆಗುವಷ್ಟು ಮಾತ್ರ ಇತ್ತು. ನೀನಂದಿದ್ದೆ ನೀವೆಲ್ಲಾ ಗಂಧಕದ ಚಿಲುಮೆಗೆ ಹೋಗುವಿರೆಂದು."

"ಹೌದು, ಅಲ್ಲಿಗೇ ನಾವು ಹೋಗ್ತಾ ಇದ್ದೆವು" ಕೆನ್ ಅಂಕಲ್ ಅಂದರು. "ಆದರೆ ನಾವು ಅಲ್ಲಿ ತಲುಪುವ ಮುನ್ನವೇ ಬೆಟ್ಟದಲ್ಲಿ ದಾರಿ ತಪ್ಪಿದೆವು."

"ನೀವು ಹೇಗೆ ಬೆಟ್ಟದಲ್ಲಿ ದಾರಿ ತಪ್ಪಲು ಸಾಧ್ಯ?"

"ನೀವುಗಳು ನೇರವಾಗಿ ನದಿಯ ಪಕ್ಕದಲ್ಲಿ ನಡೆದು ಹೋಗಿ ಆಮೇಲೆ ಕಣಿವೆ ಮೇಲೆ... ಮಾರ್ಗ ನಿನಗೆ ಚೆನ್ನಾಗಿ ಗೊತ್ತಿರಬೇಕು. ಯಾಕೆಂದರೆ ನೀನೊಬ್ಬ ಮಾರ್ಗದರ್ಶಿ. ಹಿಂದೆಯೂ ನೀನು ಅಲ್ಲಿ ಹೋಗಿ ಬಂದಿದ್ದೀಯೆ"

"ಹೌದು, ನನಗೆ ಗೊತ್ತು" ಕೆನ್ ಅಂಕಲ್ ಜೋಲು ಮೋರೆ ಹಾಕಿಕೊಂಡು ಹೇಳಿದರು. "ಆದರೆ ನಾನು ರಸ್ತೆ ಮರೆತುಬಿಟ್ಟೆ. ಆದರೆ ನನಗೆ ಕಣಿವೆ ದಾರಿ ಮರೆತೇ ಹೋಯಿತು. ಅವರನ್ನು ಬೇರೊಂದು ಕಣಿವೆ ಕಡೆ ಕರೆದುಕೊಂಡು ಹೋದೆ. ನದಿಯ ಮುಂದಿನ ತಿರುವಿನಲ್ಲಿ ಚಿಲುಮೆಗಳಿವೆ ಎಂದುಕೊಳ್ಳುತ್ತಾ ಹೋಗ್ತಿದ್ದೆ. ಬೆಟ್ಟದ ಮೇಲೆ ತಲುಪಿ ಕೆಳಗೆ ಬಗ್ಗಿ ನೋಡಿದಾಗಲೇ ನನಗೆ ಗೊತ್ತಾಗಿದ್ದು ನಾವು ತಪ್ಪು ಸ್ಥಳಕ್ಕೆ ಬಂದಿದ್ದೇವೆ ಎಂಬುದು. ನಕ್ಷತ್ರಗಳ ಕೆಳಗೆ ನಾವು ರಾತ್ರಿ ಕಳೆಯಬೇಕಾಯಿತು. ವಿಪರೀತ ಚಳಿಯಾಗುತ್ತಿತ್ತು. ನಾವು ಮಾರನೆ ದಿವಸ ಹತ್ತಿರದ ದಾರಿಯಿಂದ, ಮಸ್ಸೂರಿ ಮೂಲಕ ವಾಪಸ್ ಬಂದುಬಿಡಬಹುದು ಎಂದುಕೊಂಡೆ. ಆದರೆ ನಾವು ತಪ್ಪು ದಾರಿ ಹಿಡಿದು ಅದಕ್ಕೆ ಬದಲು ಕೆಮ್ಟಟಿ ತಲಪಿದೆವು... ಆಮೇಲೆ ಮೋಟಾರ್ ರಸ್ತೆ ತನಕ ನಡಕೊಂಡು ಬಂದು, ಅಲ್ಲಿ ಒಂದು ಬಸ್ಸು ಹಿಡಿದೆವು."

ನಾನು ಕೆನ್ ಅಂಕಲ್ ಅನ್ನು ಹಾಸಿಗೆ ಮೇಲೆ ಮಲಗಿಸಲು, ಅಜ್ಜಿಗೆ ಸಹಾಯ ಮಾಡಿದೆ. ಆಮೇಲೆ ಅವರಿಗೆ ಶಕ್ತಿವರ್ಧಕ ಈರುಳ್ಳಿ ಸಾರು ಮಾಡಲೂ ಅವಳಿಗೆ ಸಹಾಯ ಮಾಡಿದೆ. ಸಾರನ್ನು ಅವರಿಗೆ ಒಂದು ತಟ್ಟೆಯಲ್ಲಿಟ್ಟುಕೊಂಡು ಹೋಗಿ ಕೊಟ್ಟೆ. ಅವರು ಕುಡಿಯಬೇಕಾದರೆ ಒಂದು ತರಹ ಮುಖ ಸೊಟ್ಟಗೆ ಮಾಡಿದರು. ಆಮೇಲೆ ಮತ್ತಷ್ಟು ಬೇಕೆಂದು ಕೇಳಿದರು.

ಅವರು ಎರಡು ದಿವಸ ಮಲಗಿದ್ದರು. ಆಗ ನಾನು ಮತ್ತು ದಾಯಿ ಒಬ್ಬರಾದ ನಂತರ ಒಬ್ಬರಂತೆ ಅವರಿಗೆ ಊಟ ತೆಗೆದುಕೊಂಡು ಹೋಗಿ ಕೊಡುತ್ತಿದ್ದೆವು. ಅವರಿಗೆ ಸ್ವಲ್ಪವೂ ಕೃತಜ್ಞತೆ ಇರಲಿಲ್ಲ. ನನಗನ್ನಿಸುತ್ತೆ ಕೆಲವು ಅಂಕಲ್‌ಗಳು ಯಾವಾಗಲೂ ಅದೇ ತರಹ ಇರುತ್ತಾರೆ. ಅವರು ಎಂದೂ ಬದಲಾಗುವುದಿಲ್ಲ.

"ಚೆನ್ನಾಗಿ ತಿನ್ನು, ಆದರೆ ಮಿತಿಮೀರಿ ತಿನ್ನಬೇಡ", ಎಂದು ಅಜ್ಜಿ ಯಾವಾಗಲೂ ನನಗೆ ಹೇಳುತ್ತಿದ್ದಳು. "ಉತ್ತಮ ಆಹಾರ ದೇವರು ಕೊಟ್ಟ ವರ. ಎಲ್ಲಾ ವರಗಳಂತೆ ಅದನ್ನೂ ದುರುಪಯೋಗಪಡಿಸಿಕೊಳ್ಳಬಹುದು."

ಅವಳು ಅಡಿಗೆ ಮನೆ ಗಾದೆಗಳ ಒಂದು ಪಟ್ಟಿಯನ್ನೇ ಮಾಡಿ, ಅದನ್ನು ಉಗ್ರಾಣದ ಬಾಗಿಲಿನ ಮೇಲೆ ನನಗೆ ಓದಲು ಆಗದಷ್ಟು ಮೇಲಕ್ಕೂ ಅಲ್ಲದೆ ಮತ್ತು ಅಂಕಲ್ ಕೆನ್‌ಗೆ ಓದಲು ಆಗದಷ್ಟು ಕೆಳಗೂ ಅಲ್ಲದೆ, ಸರಿಯಾದ ಜಾಗದಲ್ಲಿ ಹಾಕಿದ್ದಳು.

ಆ ಗಾದೆಗಳು ಕೆಲವು ಇಲ್ಲಿವೆ:

ಹಗುರವಾದ ಸಂಜೆ ಊಟ ದೀರ್ಘಾಯುವಿಗೆ.

ಖಾಲಿ ತಟ್ಟೆಗಿಂತ ಒಂದು ಪುಟ್ಟ ಮೀನಾದರೂ ಲೇಸು.

ಎಲ್ಲಾ ಕೆಲಸದಲ್ಲೂ ನಿಪುಣತೆ ಇರಬೇಕು. ಗಂಜಿ ಮಾಡುವುದರಲ್ಲೂ.

ತಿನ್ನುವುದೇ ಬದುಕಲ್ಲ; ಬದುಕುವುದಕ್ಕೆ ತಿನ್ನಬೇಕು.

ಬೇರೆಯವರ ಮನೆ ಪಕ್ವಾನ್ನಕ್ಕಿಂತ ನಮ್ಮ ಮನೆ ಗಂಜಿಯೇ ಲೇಸು.

ರಾತ್ರಿಯ ಒಳ್ಳೆಯ ಊಟ ಬುದ್ಧಿಯನ್ನು ಚುರುಕಾಗಿಯೂ ಹೃದಯವನ್ನು ಹಗುರವಾಗಿಯೂ ಇಡುತ್ತೆ.

ನಿನ್ನ ನಾಲಿಗೆ ನಿನ್ನ ಪ್ರಾಣಕ್ಕೆ ಮೂಲವಾಗಬಾರದು.

ಅಂಕಲ್ ಕೆನ್‌ಗೆ ಕೂದಲು ಉದುರುತ್ತಿತ್ತು. ಬಕ್ಕ ತಲೆ ಎದ್ದು ಕಾಣುತ್ತಿತ್ತು. ಅಜ್ಜಿ ತಾನು ಬರೆದಿಟ್ಟಿದ್ದ ಪುಸ್ತಕವನ್ನು ನೋಡಿ ಬಕ್ಕ ತಲೆಗೆ ದಿವ್ಯ ಔಷಧ ಹೇಳಿದಳು. ಅದು ಕೆಲವು ಜೆರ್ಕಿನ್‌ಗಳನ್ನು ಬ್ರಾಂಡಿಯಲ್ಲಿ ನೆನಸಿ ತಯಾರಿಸಿದ ಎಣ್ಣೆ. ಆ ಔಷಧ ಬಳಸಿ ತನ್ನ ಅಜ್ಜ ಸಫಲತೆ ಪಡೆದಿದ್ದರೆಂದು ಅಜ್ಜಿ ಹೇಳುವಳು. ಆ ಎಣ್ಣೆಯನ್ನು ಉಪಯೋಗಿಸಿ ನೋಡುವುದಾಗಿ ಕೆನ್ ಅಂಕಲ್ ಹೇಳಿದರು. ಅಜ್ಜಿ ಕೆಲವು ಜೆರ್ಕಿನ್ಗಳನ್ನು ಬ್ರಾಂದಿಯಲ್ಲಿ ಒಂದು ವಾರ ನೆನಸಿಟ್ಟು ನಂತರ ಅದನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಹೇಳಿ ಕೆನ್ ಅಂಕಲ್‌ಗೆ ಕೊಟ್ಟಳು. ಬೆಳಗ್ಗೆ ಮತ್ತು ರಾತ್ರಿ ಒಂದು ತೊಟ್ಟು ನೆತ್ತಿಯ ಮೇಲೆ ಹಾಕಿಕೊಂಡು ಚೆನ್ನಾಗಿ ಉಜ್ಜಬೇಕೆಂದು ಅಜ್ಜಿ ಅವನಿಗೆ ತಿಳಿಸಿದಳು.

ಮರುದಿನ ಅಜ್ಜಿ ಅಂಕಲ್ ಕೆನ್ ಅವರ ಕೋಣೆಯಲ್ಲಿ ನೋಡಿದಾಗ, ಅಂಕಲ್ ಕೆನ್ ಶೀಶೆಯಲ್ಲಿದ್ದ ಬ್ರಾಂದಿಯನ್ನು ಕುಡಿದು ಜೆರ್ಕಿನ್‌ಗಳನ್ನು ಮಾತ್ರ ಉಳಿಸಿದ್ದರು.

ಅಂಕಲ್‌ಗೆ ಸಿಳ್ಳೆ ಹಾಕುವುದು ಒಂದು ಪ್ರಿಯವಾದ ಹವ್ಯಾಸ. ಅವರಿಗೆ ಮಾಡಲು ಏನೂ ಕೆಲಸವಿರುತ್ತಿರಲಿಲ್ಲ. ಆದ್ದರಿಂದ ಜೇಬಿನಲ್ಲಿ ಕೈಗಳನ್ನು ಇಳಿಬಿಟ್ಟು ತೋಟದ ಸುತ್ತಲೂ ರಸ್ತೆಯಲ್ಲಿ ಅತ್ತಿಂದಿತ್ತ ಅಡ್ಡಾಡುತ್ತಿದ್ದರು.

ಅವರು ಯಾವಾಗಲೂ ಒಂದೇ ಧಾಟಿಯಲ್ಲಿ, ಸ್ವಲ್ಪವೂ ಇಂಪಾಗಿರದ ರಾಗದಲ್ಲಿ ಸಿಳ್ಳುಹಾಕುತ್ತಿದ್ದರು. "ಇವತ್ತು ಏನು ಸಿಳ್ಳೆ ಹೊಡೀತಿದ್ದೀರಿ, ಕೆನ್ ಅಂಕಲ್?" ನಾನು ಕೇಳುವೆ. " 'ಓಲ್ ಮ್ಯಾನ್ ರಿವರ್' ನಿನಗೆ ಅಷ್ಟೂ ಗೊತ್ತಾಗುವುದಿಲ್ಲವೇ? ಮತ್ತು ಇನ್ನೊಂದು ಸಲ ಯಾವಾಗಲಾದರೂ ತಿರುಗಿ ಅದನ್ನೇ ಸಿಳ್ಳೆ ಅವರು ಹೊಡೆಯುತ್ತಿದ್ದಾಗ, ನಾನು ಕೇಳ್ತಿದ್ದೆ. "ಓಲ್ ಮ್ಯಾನ್ ರಿವರ್‌ನ್ನೇ ಸಿಳ್ಳು ಹೊಡೆಯುತ್ತಿದ್ದೀರಿ ಅಲ್ವೇ ಅಂಕಲ್?"

"ಇಲ್ಲಪ್ಪಾ, ಇಲ್ಲ. ಇದು ಡ್ಯಾನಿ ಬಾಯ್. ನಿನಗೆ ಅಷ್ಟು ವ್ಯತ್ಯಾಸವೂ ಗೊತ್ತಾಗುವುದಿಲ್ಲವೇ?"

ಹಾಗೆಯೇ ಸಿಳ್ಳು ಹಾಕುತ್ತಾ, ವಿಲಕ್ಷಣವಾಗಿ ಮೈ ಬಾಗಿಸಿಕೊಂಡು ನಡೆದಾಡುತ್ತಿದ್ದರು.

ಒಮ್ಮೊಮ್ಮೆ ಅವರು ಸಿಳ್ಳು ಹಾಕುತ್ತಿದ್ದಾಗ ಅಜ್ಜಿಗೆ ಸಿಟ್ಟೇರುತ್ತಿತ್ತು.

"ನಿಲ್ಲಿಸಬಾರದೇನೋ ಆ ಸಿಳ್ಳೆ ಹೊಡೆಯೋದನ್ನ ಕೆನ್? ಅದನ್ನು ಕೇಳಿ ನನ್ನ ಕಿವಿಗೆ ಚಿಟ್ಟು ಹಿಡಿಯುತ್ತಿದೆ. ಅದಕ್ಕೆ ಬದಲು ನೀನು ಹಾಡೋಕೆ ಯಾಕೆ ಪ್ರಯತ್ನಿಸಬಾರದು?"

"ನಂಗಾಗೋಲ್ಲಾ. ಅದು ದಿ ಬ್ಲ್ಯೂ ಡಾನುಬೇ. ಅದರಲ್ಲಿ ಪದ್ಯಗಳೇ ಇಲ್ಲ." ಎಂದು ಸಿಳ್ಳು ಹಾಕುತ್ತಾ ಅಡುಗೆ ಮನೇ ಸುತ್ತ ಅವರು ಕುಣಿದಾಡುತ್ತಾ ಹೋದರು.

"ನೋಡು ನೀನು ವರಾಂಡದಲ್ಲಿ ಕುಳಿತು ಏನು ಬೇಕಾದರೂ ಮಾಡು. ಬೇಕಾದರೆ ಸಿಳ್ಳು ಹೊಡಿ ಅಥವಾ ಕುಣಿದಾಡು." ಅಜ್ಜಿ ಹೇಳಿದಳು. "ನಾನು ಅಡಿಗೆ ಮನೇಲಿ ಮಾತ್ರ ಏನೂ ಮಾಡೋಕೆ ಬಿಡೋಲ್ಲ. ಅದರಿಂದ ಅಡಿಗೆ ಕೆಟ್ಟುಹೋಗುತ್ತೆ.

ಕೆನ್ ಅಂಕಲ್ ಒಂದು ಹುಳುಕು ಹಲ್ಲನ್ನು ಕೀಳಿಸಿಕೊಂಡಾಗ ಅವರು ಇನ್ನು ಸಿಳ್ಳೆ ಹೊಡೆಯೋದು ನಿಲ್ಲಿಸ್ತಾರೆ ಎಂದುಕೊಂಡೆವು. ಆದರೆ ಅದು ಇನ್ನೂ ಜೋರಾಯ್ತು. ಧ್ವನಿ ಇನ್ನಷ್ಟು ಕೀರಲಾಯಿತು. ಒಂದು ದಿನ ಅವರು ಜೇಬಿನಲ್ಲಿ ಕೈ ಹಾಕಿಕೊಂಡು, ಏನೂ ಕೆಲಸವಿಲ್ಲದೆ ತುಂಬಾ ಜೋರಾಗಿ ಸಿಳ್ಳೆ ಹೊಡೆಯುತ್ತಾ ರಸ್ತೆಯಲ್ಲಿ ಅಡ್ಡಾಡುತ್ತಿದ್ದಾಗ, ಒಂದು ಹುಡುಗಿ ಅವನ ಮುಂದಿನಿಂದ ಬೈಸಿಕಲ್ ಮೇಲೆ ಹೋದಳು. ಇದ್ದಕ್ಕಿದ್ದಂತೆ ಬೈಸಿಕಲ್ ನಿಲ್ಲಿಸಿ, ಅವಳು ಕೆಳಗಿಳಿದು, ಅವರ ದಾರಿಗೆ ಅಡ್ಡವಾಗಿ ನಿಂತಳು. "ಕೆನಿತ್ ಬಾಂಡ್, ಪ್ರತಿ ಸಲ ನಾನು ಹೋಗುವಾಗಲೂ ನೀನು ನನ್ನನ್ನು ನೋಡಿ ಸಿಳ್ಳು ಹಾಕಿದರೆ ನಾನು ನಮ್ಮ ಅಣ್ಣನನ್ನು ಕರೆದುಕೊಂಡು ಬಂದು ನಿನ್ನನ್ನು ಚೆನ್ನಾಗಿ ಒದೆಸುತ್ತೇನೆ" ಎಂದಳು.

ಕೆನ್ ಅಂಕಲ್‌ನ ಮುಖ ಕೆಂಪಾಯಿತು. "ನಾನು ನಿನಗಾಗಿ ಸಿಳ್ಳು ಹೊಡೀಲಿಲ್ಲ" ಅವರೆಂದರು.

"ಹೌದಾ, ಈ ರಸ್ತೇಲಿ ಇನ್ಯಾರೂ ನನಗೆ ಕಾಣಿಸುತ್ತಿಲ್ಲವಲ್ಲ."

"ನಾನು ಗಾಡ್‌ಸೇವ್ ದಿ ಕಿಂಗ್ ಎಂದು ಸಿಳ್ಳು ಹಾಕುತ್ತಿದ್ದೆ. ನಿನಗೆ ಅಷ್ಟೂ ಗೊತ್ತಾಗಲಿಲ್ಲವಾ?"



# ಉದ್ಯೋಗಕ್ಕೆ ಸಿದ್ಧನಾದ ಕೆನ್ ಅಂಕಲ್

"ಕೆನ್ ಅಂಕಲ್ ವಿಷಯದಲ್ಲಿ ನಾವೇನಾದರೂ ಮಾಡಬೇಕು," ಅಜ್ಜಿ ನಿರ್ವಾಹವಿಲ್ಲದೆ ಹೇಳಿದಳು.

ನಾನು ಅವಳ ಜೊತೆ ಅಡಿಗೆ ಮನೆಯಲ್ಲಿದ್ದೆ. ಬಟಾಣಿ ಸುಲಿಯುತ್ತಾ ಮಧ್ಯೆ ಮಧ್ಯೆ ಒಂದೊಂದು ಕಾಳು ಬಾಯಿಗೆ ಎಸೆದುಕೊಳ್ಳುತ್ತಿದ್ದೆ. ಸೂಸಿ, ಸಿಯಾಮಿಸ್ ಬೆಕ್ಕು ಪಕ್ಕದ ಕಟ್ಟೆಯ ಮೇಲೆ ಕುಳಿತಿತ್ತು. ಅಜ್ಜಿ ತಯಾರು ಮಾಡುತ್ತಿದ್ದ ಐರಿಷ್ ಪಾಕ ತುಂಬಾ ಇಷ್ಟ. "ಅವನಿಲ್ಲಿರೋದು ನನಗೇನೂ ಬೇಜಾರಿಲ್ಲ" ಅಜ್ಜಿ ಅಂದಳು. "ಅಲ್ಲದೆ ಅವನಿಂದ ನನಗೆ ಹಣವೂ ಬೇಕಿಲ್ಲ. ಆದರೆ ಒಬ್ಬ ಯುವಕ ಬಹಳ ದಿವಸ ಕೆಲಸವಿಲ್ಲದೆ ಕಾಲ ಕಳೆಯುವುದು ಒ[illegible]ಯದಲ್ಲ."

"ಹಾಗಾದರೆ [illegible]ನ್ ಅಂಕಲ್ ಒಬ್ಬ ಯುವಕರೇ, ಅಜ್ಜಿ?"

"ಅವನಿಗೀಗ  ಲವತ್ತು. ಎಲ್ಲಾರೂ ಹೇಳ್ತಾರೆ, ವಯಸ್ಸಾಗುತ್ತ ಆಗುತ್ತಾ ಅವನು ಸುಧಾರಿಸುತ್ತಾನೆ ಅಂತ".

"ಆಮೇಲೆ ಅವನು ಮೇಬಲ್ ಆಂಟಿ ಮನೆಗೆ ಹೋಗಿ ಅವರ ಜೊತೆ ಇರಬಹುದು. ಅವನು ಮೇಬಲ್ ಆಂಟಿ ಜೊತೆ ಇರಲು ಅವರ ಮನೆಗೆ ಹೋಗ್ತಾನೆ. ಅವನು ಎಮಿಲಿ ಆಂಟಿ ಮತ್ತು ಬೆರೈಲ್ ಆಂಟಿ ಜೊತೆ ಕೂಡ ಹೋಗಿರ್ತಾನೆ. ಅವನಿಗೆ ಬೇಕಾದಷ್ಟು ಮಂದಿ ಸಹೋದರಿಯರಿದ್ದಾರೆ. ಅವರೆಲ್ಲ ಅವನಿಗೆ ಅತಿ ಪ್ರಿಯರು. ಅದೇ ಅವನ ತಾಪತ್ರಯ... ಅವರೆಲ್ಲಾ ತಮ್ಮ ಮನೆಯಲ್ಲಿ ಅವನನ್ನು ಇಟ್ಟುಕೊಳ್ಳಲು ಅಥವಾ ಅವನ ಜೊತೆ ತಾವಿರಲು ಸಿದ್ಧರಾಗಿದ್ದಾರೆ. ಅವರುಗಳ ಗಂಡಂದಿರೆಲ್ಲರೂ ಒಳ್ಳೇ ಅನುಕೂಲಸ್ಥರು. ಅಲ್ಲದೆ ಅವನನ್ನು ಆಗಾಗ್ಗೆ ಬಂದಾಗ ಉಪಚಾರ ಮಾಡ್ತಾರೆ. ಅದಕ್ಕೆ ನಮ್ಮ ಕೆನ್ ಮೂರು ತಿಂಗಳು ಎಮಿಲಿ ಜೊತೆ, ಮೂರು ತಿಂಗಳು ನನ್ನೊತೆ ಇರ್ತಾನೆ."

"ಒಂದು ರೀತಿಲಿ ಅಂಕಲ್ ಕೆನ್ ತುಂಬ ಅದೃಷ್ಟವಂತರೇ" ಎಂದೆ ನಾನು.

"ಅವನ ಅದೃಷ್ಟ ತುಂಬಾ ದಿನ ಏನೂ ಇರೋಲ್ಲ. ಈಗಾಗಲೇ ಮೇಬಲ್ ನ್ಯೂಜಿಲ್ಯಾಂಡ್‌ಗೆ ಹೋಗುವುದಾಗಿ ಹೇಳ್ತಿದಾಳೆ. ಇನ್ನೊಂದು ಅಥವಾ ಎರಡು ವರ್ಷಗಳಲ್ಲಿ ಇಂಡಿಯಾ ಸ್ವತಂತ್ರ ಆಗಿಬಿಟ್ಟರೆ ಎಮಿಲಿ ಮತ್ತು ಬೆರ್ಲೈಲ್ ಮುಕ್ಕಾಲು ಪಾಲು ಇಂಗ್ಲೆಂಡಿಗೆ ಹೋಗುತ್ತಾರೆ. ಯಾಕೆಂದರೆ ಇವರುಗಳ ಗಂಡಂದಿರು ಸೇನೆಯಲ್ಲಿದ್ದಾರೆ ಮತ್ತು ಎಲ್ಲ ಬ್ರಿಟಿಷ್ ಅಧಿಕಾರಿಗಳೂ ಭಾರತ ಬಿಟ್ಟು ಹೋಗೇ ಹೋಗುತ್ತಾರೆ."

"ಅಂಕಲ್ ಕೆನ್ ಕೂಡಾ ಇಂಗ್ಲೆಂಡಿಗೆ ಅವರನ್ನು ಹಿಂಬಾಲಿಸಬಹುದಲ್ಲವೇ?"

"ಅವನೇನಾದರೂ ಅಲ್ಲಿಗೆ ಹೋದರೆ ಕೆಲಸ ಮಾಡಲು ಶುರುಮಾಡಬೇಕಾಗುತ್ತೆ ಅಂತ ಅವನಿಗೆ ಗೊತ್ತು. ನಿಮ್ಮತ್ತೆಯವರಿಗೆ ಕೆಲಸದವರಿಲ್ಲದೆ ನಿಭಾಯಿಸಬೇಕಾದ ಪರಿಸ್ಥಿತಿ ಉಂಟಾದರೆ ಅವರು ಕೆನ್‌ಮಾವನ್ನ ಹೆಚ್ಚು ಕಾಲ ಇಟ್ಟುಕೊಳ್ಳಲು ಇಷ್ಟಪಡುವುದಿಲ್ಲ. ಅದು ಏನಾದರೂ ಇರಲಿ, ಇಂಗ್ಲೆಂಡ್ ಅಥವಾ ನ್ಯೂಜಿಲ್ಯಾಂಡ್‌ಗೆ ಹೋಗೋ ಖರ್ಚನ್ನು ಅವನಿಗೆ ಕೊಡಲು ಯಾರು ತಾನೇ ತಯಾರಿದ್ದಾರೆ?".

"ಹೋಗಲಾಗದಿದ್ದರೆ, ಅವರು ನಿನ್ನ ಹತ್ತಿರ ಇಲ್ಲೇ ಇರುತ್ತಾರೆ, ಅಲ್ಲವೇ ಅಜ್ಜಿ. ನೀನಂತೂ ಇಲ್ಲಿ ಇದ್ದೇ ಇರುತ್ತೀಯಾ, ಅಲ್ಲವೇ?"

"ಇಲ್ಲಿ ಶಾಶ್ವತವಾಗಿ ಇರೋದಿಲ್ಲ. ನಾನು ಬದುಕಿರುವವರೆಗೆ ಮಾತ್ರ ಇರ್ತಾನೆ."

"ನೀನು ಇಂಗ್ಲೆಂಡಿಗೆ ಹೋಗೋಲ್ಲವಾ?"

"ಇಲ್ಲ, ನಾನು ಇಲ್ಲೇ ಬೆಳೆದಿದ್ದೇನೆ. ನಾನು ಮರಗಳ ಹಾಗೆ ಇಲ್ಲೇ ಬೇರು ಬಿಟ್ಟಿದ್ದೇನೆ. ನಾನು ಆಗುವತನಕ... ಬಹುಶಃ ನೀನು ದೊಡ್ಡವನಾದ ಮೇಲೆ ಇಂಗ್ಲೆಂಡಿಗೆ ಹೋದರೂ ಹೋಗಬಹುದು. ನೀನು ಶಾಲಾ ವಿದ್ಯಾಭ್ಯಾಸ ಇಂಗ್ಲೆಂಡಿನಲ್ಲೇ ಮುಗಿಸುತ್ತಿಯೋ ಏನೋ?"

"ನಿಜವಾಗಿ ನಾನು ನನ್ನ ವಿದ್ಯಾಭ್ಯಾಸವನ್ನು ಇಲ್ಲಿಯೇ ಮುಗಿಸ್ತೀನಿ. ನನ್ನ ರಜಾದಿನಗಳನ್ನೂ ನಿನ್ನ ಜೊತೆ ಕಳೆಯಬೇಕೆಂದೇ ನನ್ನ ಆಸೆ. ನಾನು ಇಂಗ್ಲೆಂಡಿಗೆ ಹೊದರೆ, ನಿನಗೆ ವಯಸ್ಸಾದ ಕಾಲದಲ್ಲಿ ನಿನ್ನನ್ನು ನೋಡಿಕೊಳ್ಳುವವರು ಯಾರು?"

"ನಾನು ಆಗಲೇ ಮುದುಕಿ ಆಗಿದೀನಿ. ಅರವತ್ತರ ಮೇಲಾಯ್ತು."

"ಅದೇನು ಮಹಾವಯಸ್ಸು? ಕೆನ್ ಅಂಕಲ್‌ಗಿಂತ ಸ್ವಲ್ಪ ದೊಡ್ಡವಳಿರಬಹುದು ಅಷ್ಟೆ. ನಿನಗೆ ನಿಜವಾಗಿಯೂ ವಯಸ್ಸಾದಾಗ ಅವರನ್ನು ಹೇಗೆ ನೋಡಿಕೊಳ್ಳುತ್ತೀ?"

"ಅವನು ಪ್ರಯತ್ನ ಪಟ್ಟರೆ ತನ್ನನ್ನು ತಾನೇ ನೋಡಿಕೋಬಹುದು. ಅವನು ತನ್ನ ಪಾಡು ತಾನು ನೋಡಿಕೊಳ್ಳಲು ಶುರು ಮಾಡಬೇಕಾಗಿತ್ತು. ಇಷ್ಟು ಹೊತ್ತಿಗೆ ಕೆಲಸಕ್ಕೂ ಸೇರಿರಬೇಕಾಗಿತ್ತು."

ನಾನು ಈ ಸಮಸ್ಯೆ ಕುರಿತು ಗಂಭೀರವಾಗಿ ಚಿಂತಿಸಿದೆ. ಅಂಕಲ್ ಕೆನ್‌ಗೆ ಸರಿಹೋಗುವಂತಹ ಯಾವ ಕೆಲಸವೂ ನನಗೆ ಹೊಳೆಯಲಿಲ್ಲ. ನಿಜ ಹೇಳುವುದಾದರೆ ಅವನಿಗೆ ಸರಿಹೊಂದುವ ಕೆಲಸ ಹುಡುಕುವವರು ಸಹ ನನಗೆ ಯಾರೂ ಕಂಡುಬರಲಿಲ್ಲ.

ಕೊನೆ ಮನೆ ಕೆಲಸದವಳು ಒಂದು ಸಲಹೆ ಕೊಟ್ಟಳು. ಗುಲ್‌ಶನ್ ಮಹಾರಾಣಿಯವರಿಗೆ ಮಕ್ಕಳ ಪಾಠಕ್ಕಾಗಿ ಒಬ್ಬ ಮಾಸ್ತರರು ಬೇಕಾಗಿದ್ದಾರೆ. ಒಬ್ಬ ಹುಡುಗ ಒಬ್ಬಳು ಹುಡುಗಿಗೆ ಪಾಠ ಹೇಳಿಕೊಟ್ಟರೆ ಸಾಕು."

"ನಿನಗೆ ಹೇಗೆ ತಿಳೀತು?" ಅಜ್ಜಿ ಕೇಳಿದಳು.

"ಮಕ್ಕಳ ಆಯಾಗಳಿಂದ ತಿಳೀತು. ಹೆಚ್ಚೇನೂ ಕೆಲಸವಿಲ್ಲ. ಇನ್ನೂರು ರೂಪಾಯಿ ಸಂಬಳ. ದಿನಾ ಬೆಳಗ್ಗೆ ಎರಡು ಗಂಟೆಗಳ ಕಾಲ ಪಾಠ ಹೇಳಿಕೊಟ್ಟರೆ ಆಯಿತು".

"ಅದು ಕೆನ್ ಅಂಕಲ್‌ಗೆ ಸರಿಯಾದ ಕೆಲಸ" ನಾನೆಂದೆ.

"ಹೌದು, ಅದು ಒಂದು ಒಳ್ಳೇ ಆಲೋಚನೆ" ಅಜ್ಜಿ ಅಂದಳು.

"ಅದಕ್ಕೆ ಅರ್ಜಿಹಾಕುವಂತೆ ನಾವು ಕೆನ್‌ಗೆ ಹೇಳಬೇಕು."

ಅವನು ಅಲ್ಲಿಗೆ ಹೊಗಿ ಅವರುಗಳನ್ನು ಕಂಡು ಬರಬೇಕು. ಮಹಾರಾಣಿಯವರು ಒಳ್ಳೆಯ ವ್ಯಕ್ತಿ. ಅವರ ಬಳಿ ಕೆಲಸ ಮಾಡಬಹುದು."

ಕೆನ್ ಅಂಕಲ್ ಕೆಲಸದ ಬಗ್ಗೆ ವಿಚಾರಿಸಲು ಅಲ್ಲಿಗೆ ಹೋಗುವುದಾಗಿ ಒಪ್ಪಿಕೊಂಡರು. ಅವರು ಅಲ್ಲಿಗೆ ಹೋದಾಗ ಮಹಾರಾಣಿಯವರು ಹೊರಗೆ ಹೋಗಿದ್ದರು. ಆದರೆ ಅವರ ಸಂದರ್ಶನ ಮಹಾರಾಜರೊಂದಿಗೆ ಆಯಿತು.

"ನೀನು ಟೆನ್ನಿಸ್ ಆಡುತ್ತೀಯಾ?" ಮಹಾರಾಜರು ಕೇಳಿದರು.

"ಹೌದು" ಎಂದರು ಕೆನ್ ಅಂಕಲ್. ತಾವು ಶಾಲೆಯ ದಿನಗಳಲ್ಲಿ ಸ್ವಲ್ಪ ಟೆನ್ನಿಸ್ ಆಡಿದ್ದನ್ನು ಅವರು ಜ್ಞಾಪಿಸಿಕೊಂಡರು.

"ಹಾಗಿದ್ದ ಪಕ್ಷದಲ್ಲಿ ನಿನಗೇ ಈ ಕೆಲಸ. ನಾನು ಡಬಲ್ಸ್ ಪಂದ್ಯಕ್ಕೆ ನಾಲ್ಕನೇ ಆಟಗಾರನನ್ನು ಹುಡುಕುತ್ತಿದ್ದೇನೆ.... ಅಂದ ಹಾಗೆ, ನೀನು ಕೇಂಬ್ರಿಡ್ಜ್‌ನಲ್ಲಿದ್ದೆಯಾ?" "ಇಲ್ಲ, ನಾನು ಆಕ್ಸ್‌ಫರ್ಡ್‌ನಲ್ಲಿದ್ದೆ" ಕೆನ್ ಅಂಕಲ್ ಹೇಳಿದರು. ಮಹಾರಾಜರು ಅವರ ಮಾತಿನಿಂದ ಪ್ರಭಾವಿತರಾದರು. ಅಕ್ಸ್‌ಫರ್ಡ್ ಮನುಷ್ಯ, ಜೊತೆಗೆ ಟೆನ್ನಿಸ್ ಆಡಬಲ್ಲ, ತಮ್ಮ ಮಕ್ಕಳಿಗಾಗಿ ತಾವು ಬಯಸಿದಂತಹ ಶಿಕ್ಷಕರಿವರು" ಎಂದುಕೊಂಡರು ಮಹಾರಾಜರು. ಅಂಕಲ್ ಅಜ್ಜಿಗೆ ತಮ್ಮ ಸಂದರ್ಶನದ ಬಗ್ಗೆ ಹೇಳಿದಾಗ, ಅಜ್ಜಿ ಕೇಳಿದಳು: ಕೆನ್, ನೀನು ಆಕ್ಸ್‌ಫರ್ಡ್‌ಗೆ ಹೋಗೇ ಇಲ್ಲ. ಹೇಗೆ ಹೇಳಿದೆ? ಹೋಗಿದ್ದೆ ಅಂತ?

"ಖಂಡಿತವಾಗಿ ನಾನು ಆಕ್ಸ್‌ಫರ್ಡ್‌ಗೆ ಹೋಗಿದ್ದೆ. ನಿನ್ನ ಅಣ್ಣ ಜಿಮ್ ಜೊತೆ ನಾನು ಎರಡು ವರ್ಷಗಳಿದ್ದಿದ್ದು ನಿನಗೆ ಜ್ಞಾಪಕವಿಲ್ಲವೇ?"

"ಹೌದು, ಆದರೆ ನೀನು ಊರಲ್ಲಿ ಅವನ ಹೋಟಲ್‌ನಲ್ಲಿ, ಅವನಿಗೆ ಸಹಾಯ ಮಾಡುತ್ತಿದ್ದೆ. ನೀನು ವಿಶ್ವವಿದ್ಯಾನಿಲಯದಲ್ಲಿ ಇರಲಿಲ್ಲ."

"ಸರಿ, ಮಹಾರಾಜರು ಯೂನಿವರ್ಸಿಟಿಗೆ ಹೋಗಿದ್ದೆಯಾ ಅಂತೇನೂ ಕೇಳಲೇ ಇಲ್ಲ. ಅವರು ನಾನು ಕೇಂಬ್ರಿಡ್ಜ್‌ನಲ್ಲಿ ಇದ್ದೆಯಾ ಎಂದು ಕೇಳಿದಾಗ ನಾನು ಇಲ್ಲ ಎಂದೆ, ನಾನು ಆಕ್ಸ್‌ಫರ್ಡ್‌ನಲ್ಲಿದ್ದುದ್ದು ಸಂಪೂರ್ಣವಾಗಿ ನಿಜ. ಅವರು ನಾನು ಆಕ್ಸ್‌ಫರ್ಡ್‌ನಲ್ಲಿ ಏನು

ಮಾಡುತ್ತಿದ್ದೆ ಎಂದು ಕೇಳಲಿಲ್ಲ. ಆದರಿಂದ ಏನು ಮಹಾ ಹೆಚ್ಚು ಕಡಿಮೆ ಆಗುತ್ತೆ?'' ಎಂದು ಸಿಳ್ಳು ಹೊಡೀತಾ ಅಡ್ಡಾಡಲು ಹೊರಟರು. ಅಂತೂ ನಮ್ಮ ಆಶ್ಚರ್ಯಕ್ಕೆ ತಕ್ಕಂತೆ ಕೆನ್ ಅಂಕಲ್ ತಮ್ಮ ಈ ನೌಕರಿಯಲ್ಲಿ ಪ್ರಾರಂಭದಲ್ಲೇ ತುಂಬಾ ಯಶಸ್ಸು ಪಡೆದರು.

ಮಹಾರಾಜರು ಅಷ್ಟೇನೂ ಒಳ್ಳೆಯ ಟೆನ್ನಿಸ್ ಆಟಗಾರರಾಗಿರಲಿಲ್ಲ. ತಮಗಿಂತ ಒಂದು ಕೈ ಕಳಪೆಯಾಗಿದ್ದವನನ್ನು ಕಂಡು ಅವರು ತುಂಬ ಸಂತೋಷಗೊಂಡರು. ಆದ್ದರಿಂದ ಡಬಲ್ಸ್ ಪಂದ್ಯದಲ್ಲಿ ಮಹಾರಾಜರ ಜೊತೆ ಆಡುವ ಬದಲು, ಅಂಕಲ್ ಕೆನ್ ಸಿಂಗಲ್ಸ್‌ನಲ್ಲಿ ಅವರ ಎದುರಾಳಿಯಾಗಿ ಆಡತೊಡಗಿದರು. ಕೆನ್ ಅಂಕಲ್ ಎಲ್ಲಿವರೆಗೂ ಮಹಾರಾಜರಿಗೆ ಸೋಲುತ್ತಿದ್ದರೋ, ಅಲ್ಲಿವರೆಗೆ ಕೆನ್ ಮಾವನ ಕೆಲಸ ಸುರಕ್ಷಿತವಾಗಿತ್ತು.

ಟೆನ್ನಿಸ್ ಪಂದ್ಯಗಳು ಮತ್ತು ಬಾತುಕೋಳಿ ಬೇಟೆಗೆ ಮಾಲೀಕರ ಸಂಗಡ ಹೋಗುವ ಕಾರ್ಯ ಕಲಾಪಗಳ ಮಧ್ಯೆ ಕೆನ್ ಅಂಕಲ್ ಮಕ್ಕಳಿಗೆ ಒಂದಿಷ್ಟು ಪಾಠವನ್ನೂ ತುರುಕುತ್ತಿದ್ದರು. ಅವರು ಮಕ್ಕಳಿಗೆ ಓದುವುದು ಬರೆಯುವುದು ಮತ್ತು ಗಣಿತ ಪಾಠ ಹೇಳಿಕೊಡುತ್ತಿದ್ದರು. ಕೆಲವು ಸಾರಿ ಅವರು ನನ್ನನ್ನೂ ತಮ್ಮ ಜೊತೆ ಕರೆದುಕೊಂಡು ಹೋಗುತ್ತಿದ್ದರು, ಏಕೆಂದರೆ ಲೆಕ್ಕದಲ್ಲಿ ತಪ್ಪು ಮಾಡಿದಾಗ ಅದನ್ನು ತಿದ್ದುವುದಕ್ಕಾಗಿ. ಕೆನ್ ಅಂಕಲ್ ಕಳೆಯುವ ಲೆಕ್ಕದಲ್ಲಿ ಅಷ್ಟೇನು ಜಾಣರಿರಲಿಲ್ಲ.

ಮಹಾರಾಜರ ಮಕ್ಕಳು ನನಗಿಂತ ಚಿಕ್ಕವರಿದ್ದರು. ಕೆನ್ ಅಂಕಲ್ ನನ್ನನ್ನು ಮಕ್ಕಳ ಜೊತೆ ಬಿಟ್ಟು ಹೋಗುವುದಕ್ಕೆ ಮುಂಚೆ "ಸ್ವಲ್ಪ ನೋಡಿಕೊಳ್ಳಪ್ಪಾ, ರಸ್ಟಿ, ಅವರುಗಳು ತಮ್ಮ ಲೆಕ್ಕ ಸರಿಯಾಗಿ ಮಾಡುತ್ತಿದ್ದಾರೋ ಇಲ್ಲವೊ ಅಂತ'' ಎಂದು ಹೇಳಿ ಟೆನ್ನಿಸ್ ಕೋರ್ಟ್ ಕಡೆಗೆ, ಜೇಬಿನಲ್ಲಿ ಕೈ ಹಾಕಿಕೊಂಡು ಅಪಸ್ವರದಲ್ಲಿ ಸಿಳ್ಳು ಹಾಕುತ್ತಾ ಹೋಗುತ್ತಿದ್ದರು. ಒಂದೇ ಲೆಕ್ಕಕ್ಕೆ ಬೇರೆ ಬೇರೆ ಉತ್ತರಗಳನ್ನು ಕೊಟ್ಟರೂ ಅವರು ಇಬ್ಬರು ಶಿಷ್ಯರ ಬೆನ್ನನ್ನು ತಟ್ಟುತ್ತಾ ಪ್ರೋತ್ಸಾಹದಿಂದ ಹೇಳುತ್ತಿದ್ದರು "ಶಾಭಾಷ್, ನೀವು ಕಷ್ಟಪಟ್ಟು ಕಲಿಯುತ್ತಿರುವುದನ್ನು ನೋಡಿ ನನಗೆ ಬಹಳ ಸಂತೋಷ. ನಿಮ್ಮಿಬ್ಬರಲ್ಲಿ ಒಬ್ಬರ ಉತ್ತರ ಸರಿ, ಇನ್ನೊಬ್ಬರ ಉತ್ತರ ತಪ್ಪು, ಆದರೆ ನಿಮ್ಮಿಬ್ಬರಲ್ಲಿ ಯಾರನ್ನೂ ನಾನು ನಿರುತ್ತೇಜಿಸಲಾರೆ. ಆದ್ದರಿಂದ, ನಾನು ಯಾರು ಸರಿ ಯಾರು ತಪ್ಪು ಎಂದು ಹೇಳೋಲ್ಲ,'' ಎನ್ನುತ್ತಿದ್ದರು. ಆದರೆ ಅನಂತರ ಮನೆಗೆ ಹೋಗೋವಾಗ ಅವರು: "ಯಾರ ಉತ್ತರ ಸರಿಯಾಗಿತ್ತು ರಷ್ಟಿ?'' ಎಂದು ನನ್ನನ್ನು ಕೇಳುತ್ತಿದ್ದರು.

"ಇಬ್ಬರ ಉತ್ತರವೂ ತಪ್ಪಾಗಿತ್ತು ಕೆನ್ ಅಂಕಲ್'' ಎನ್ನುತ್ತಿದ್ದೆ ನಾನು.

ಮಹಾರಾಜರು ಟೆನ್ನಿಸ್‌ನಲ್ಲಿ ಯಾವಾಗಲೂ ಸೋಲದ ಹಾಗೆ ಕೆನ್ ಅಂಕಲ್ ನೋಡಿಕೊಂಡಿದ್ದಿದ್ದರೆ ಅವರು ಯಾವತ್ತೂ ಕೆಲಸ ಕಳೆದುಕೊಳ್ಳುತ್ತಿರಲಿಲ್ಲ. ಅಂದರೆ ಕೆನ್ ಅಂಕಲ್‌ಗೆ ಗೆಲ್ಲುವ ಉದ್ದೇಶವಿತ್ತು ಎಂದರ್ಥವಲ್ಲ. ಆದರೆ ಮಹಾರಾಜರ ಕಾರ್ಯದರ್ಶಿಗಳು ಮತ್ತು ಅತಿಥಿಗಳ ಜೊತೆ ಯಾವಾಗಲಾದರೂ ಒಮ್ಮೊಮ್ಮೆ ಆಟ ಆಡುತ್ತಾ ಇದ್ದುದರಿಂದ ಅವರ ಟೆನ್ನಿಸ್ ಸುಧಾರಿಸಿತ್ತು; ಆದ್ದರಿಂದ ಸೋಲಲು ಎಷ್ಟೇ

ಪ್ರಯತ್ನಪಟ್ಟರೂ ಮಾಲೀಕರ ಎದುರು ಸೋಲಲು ಅಂಕಲ್ ಕೆನ್‌ಗೆ ಸಾಧ್ಯವಾಗಲಿಲ್ಲ. ಮಹಾರಾಜರು ಕೋಪೋದ್ರಿಕ್ತರಾದರು. "ಮಿ.ಬಾಂಡ್, ನಿನಗೆ ಸೋಲುವುದರ ಮಹತ್ವ ಇನ್ನೂ ಗೊತ್ತಾಗಿಲ್ಲ ಎಂದು ನನಗನಿಸುತ್ತೆ. ನೋಡು, ನಾವೆಲ್ಲರೂ ಯಾವಾಗಲೂ ಗೆಲ್ಲುತ್ತಲೇ ಇರಲು ಸಾಧ್ಯವಿಲ್ಲ. ಸೋಲುವವರಿಲ್ಲದಿದ್ದರೆ ಈ ಪ್ರಪಂಚ ಎಲ್ಲಿರುತ್ತಿತ್ತು?".

"ನಾನು ಅತ್ಯಂತ ದುಃಖಿತನಾಗಿದ್ದೇನೆ" ಕೆನ್ ಅಂಕಲ್ ಹೇಳಿದರು. ಅದು ಆಕಸ್ಮಿಕವಾಗಿ ದೊರೆತ ಜಯ ಮಹಾಪ್ರಭು". ಮಹಾರಾಜರು ಕೆನ್ ಅಂಕಲ್ ಅನ್ನು ಮನ್ನಿಸಿದರು; ಆದರೆ ಒಂದು ವಾರದ ನಂತರ ಪುನಃ ಕೆನ್ ಅಂಕಲ್ ಗೆದ್ದರು. ಮಹಾರಾಜರು ಒಂದು ಮಾತೂ ಆಡದೆ ಮೈದಾನದಿಂದ ರಭಸದಿಂದ ಹೊರಟು ಹೋದರು. ಮಾರನೆಯ ದಿವಸ ವಾಠದ ಸಮಯದಲ್ಲಿ ಅವರು ಕಾಣಿಸಿಕೊಂಡರು. ಯಥಾ ಪ್ರಕಾರ ಅಂಕಲ್ ಕೆನ್ ಮತ್ತು ಮಕ್ಕಳು ಚುಕ್ಕೆ ಮತ್ತು ಗೆರೆ ಆಟದಲ್ಲಿ ಮಗ್ನರಾಗಿದ್ದರು.

"ನಾಳೆಯಿಂದ ನಿನ್ನ ಸೇವೆಯ ಆವಶ್ಯಕತೆ ನಮಗಿಲ್ಲ. ಮಿ.ಬಾಂಡ್, ಒಂದು ತಿಂಗಳ ನೋಟಿಸ್‌ಗೆ ಬದಲಾಗಿ ನಿನಗೆ ಒಂದು ತಿಂಗಳ ಸಂಬಳ ಕೊಡುವಂತೆ ನನ್ನ ಕಾರ್ಯದರ್ಶಿಗೆ ಹೇಳಿದ್ದೇನೆ."

ಕೆನ್ ಅಂಕಲ್ ತಮ್ಮ ಕೈಗಳನ್ನು ಜೇಬಿನಲ್ಲಿ ತೂರಿಸಿಕೊಂಡು ಪ್ರಸನ್ನರಾಗಿ ಸಿಳ್ಳು ಹೊಡೆಯುತ್ತ ಮನೆಗೆ ಬಂದರು.

"ಇದೇನು ನೀನು ಇಷ್ಟು ಬೇಗ," ಅಜ್ಜಿ ಕೇಳಿದಳು.

"ಮಹಾರಾಜರಿಗೆ ಇನ್ನು ನನ್ನ ಅಗತ್ಯ ಇಲ್ಲ" ಕೆನ್ ಅಂಕಲ್ ಹೇಳಿದರು.

"ಆಯ್ತು ಬಿಡು, ಪರವಾಗಿಲ್ಲ, ಒಳಗೆ ಬಂದು ಟೀ ಕುಡಿ."

ಅವರು ಹೆಚ್ಚು ದಿನ ಕೆಲಸದಲ್ಲಿ ಇರೋದಿಲ್ಲ ಅಂತ ಅಜ್ಜಿಗೆ ಗೊತ್ತಿತ್ತೆಂದು ಕಾಣುತ್ತದೆ. ಅಲ್ಲದೆ ಪದೇ ಪದೇ ಮೂದಲಿಸುವುದು ಅಜ್ಜಿಯ ಸ್ವಭಾವವಲ್ಲ. ನಂತರ ಅವಳು ಹೇಳಿದಳು, "ಅವನು ಪ್ರಯತ್ನವಂತೂ ಮಾಡಿದ. ಹಾಗೆ ನೋಡಿದರೆ ಅವನ ಬಾಕಿ ಕೆಲಸಗಳಿಂತ ಈ ಕೆಲಸ ಸಾಕಷ್ಟು ದಿನ ನಡೀತು – ಎರಡು ತಿಂಗಳು ಪೂರ್ತಿ!"



# ಕೆನ್ ಅಂಕಲ್ ಸ್ಟಿಯರಿಂಗ್ ಹಿಡಿದಾಗ

ನಾನು ಮುಂದಿನ ಸಲ ಡೆಹ್ರಾಗೆ ಭೇಟಿ ಇತ್ತಾಗ, ನಿಲ್ದಾಣದಲ್ಲಿ ಮೋಹನ್ ನನ್ನನ್ನು ಭೇಟಿಯಾದ. ನಾವುಗಳು ಸಾಮಾನುಗಳೊಡನೆ ಟಾಂಗ ಹತ್ತಿ, ಡೆಹ್ರಾದ ನಿಶ್ಶಬ್ದ ರಸ್ತೆಯಲ್ಲಿ ಗಡಗಡ ಶಬ್ದ ಮಾಡುತ್ತಿದ್ದ ಗಾಡಿಯಲ್ಲಿ ಅಜ್ಜಿ ಮನೆ ದಾರಿ ಹಿಡಿದೆವು.

"ಏನೆಲ್ಲಾ ಸಮಾಚಾರ ಇದೆಯೋ ಹೇಳು ಮೋಹನ್".

"ಹೇಳುವಂತಹುದೇನಿಲ್ಲ. ಕೆಲವು ಸಾಹೇಬರುಗಳು ಮನೆಗಳನ್ನು ಮಾರಿ ಹೋಗ್ತಾ ಇದ್ದಾರೆ. ಸೂಸಿ ಮರಿಗಳನ್ನು ಹಾಕಿದೆ."

ನಾನು ಎರಡು ರಾತ್ರಿ ಟ್ರೈನ್‌ನಲ್ಲಿ ಕಳೆದಿದ್ದೆ ಎಂದು ಅಜ್ಜಿಗೆ ಗೊತ್ತಿತ್ತು. ಅದಕ್ಕೇ ಅವಳು ನನಗೋಸ್ಕರ ಭಾರಿ ಬ್ರೇಕ್‌ಫಾಸ್ಟ್ ತಯಾರು ಮಾಡಿದ್ದಳು. ರವೆಪಾಯಸ, ಬೇಯಿಸಿದ ಮೊಟ್ಟೆಯೊಡನೆ ಟೋಸ್ಟ್, ಹಂದಿ ಮಾಂಸದ ಜೊತೆ ಹುರಿದ ಟೊಮ್ಯಾಟೋ, ಬ್ರೆಡ್ ಮತ್ತು ಜ್ಯಾಮ್. ಸಿಹಿಯಾದ ಹಾಲಿನ ಟೀ. ಕೆನ್ ಅಂಕಲ್‌ನಿಂದ ಕಾಗದ ಬಂದಿತ್ತು ಎಂದು ಅಜ್ಜಿ ಹೇಳಿದಳು. "ಅವನೀಗ ಸಿಮ್ಲಾದಲ್ಲಿರುವ ಫಿರ್ಪ್ರೋ ಹೋಟಲ್‌ನಲ್ಲಿ ಅಸಿಸ್ಟೆಂಟ್ ಮ್ಯಾನೇಜರ್ ಆಗಿರುವುದಾಗಿ ತಿಳಿಸಿದ್ದಾನೆ." ಅವಳೆಂದಳು.

ಕೈತುಂಬಾ ಸಂಬಳ ಅಲ್ಲದೆ ಅವನಿಗೆ ಉಚಿತ ಊಟ ಮತ್ತು ವಸತಿ. ಅದು ಸ್ಥಿರವಾದ ಕೆಲಸ. ಅವನು ಅಲ್ಲಿ ಹಲ್ಲು ಕಚ್ಚಿ ಕೊಂಡಿರುತ್ತಾನೆ ಎಂದು ನಾನು ಭಾವಿಸಿದ್ದೀನಿ" ಎಂದಳು ಅಜ್ಜಿ. ಇದಾದ ಮೂರು ದಿನಗಳಲ್ಲೇ, ಕೆನ್ ಅಂಕಲ್ ತನ್ನ ಹಾಸಿಗೆ ಮತ್ತು ನೆಗ್ಗಿ ಹೋಗಿದ್ದ ಪೆಟ್ಟಿಗೆಯೊಂದಿಗೆ ವರಾಂಡದ ಮೇಲೆ ಪ್ರತ್ಯಕ್ಷರಾದರು.

"ಹೋಟೆಲ್ ಕೆಲಸ ಬಿಟ್ಟು ಬಿಟ್ಟೆಯಾ?" ಅಜ್ಜಿ ಕೇಳಿದಳು. "ಇಲ್ಲ, ಕೆನ್ ಅಂಕಲ್ ಹೇಳಿದರು ಅವರೇ ಮುಚ್ಚಿಬಿಟ್ಟರು."

"ನಿನ್ನಿಂದಾಗಿ ಮುಚ್ಚಲಿಲ್ಲ ತಾನೇ?"

"ಇಲ್ಲ ಅತ್ತೆ. ಬೆಟ್ಟ ಗುಡ್ಡಗುಳಲ್ಲಿ ಎಲ್ಲ ದೊಡ್ಡ ಹೋಟಲ್‌ಗಳನ್ನು ಮುಚ್ಚುತ್ತಾ ಇದ್ದಾರೆ."

"ಹೋಗಲಿ ಬಿಡು. ಬಾ ಊಟ ಮಾಡು. ಇವತ್ತು ರಸ್ಕಿಗೆ ಪ್ರಿಯವಾದ ಕೊಬ್ರಿಕರಿ ಮಾಡಿದ್ದೀನಿ" "ಓಹೋ, ಅವನೂ ಇಲ್ಲಿದ್ದಾನಾ? ನನಗೆ ಅಷ್ಟೊಂದು ಮಂದಿ ಸೋದರಸೊಸೆಯರು ಮತ್ತು ಸೋದರಳಿಯಂದಿರಿದ್ದರೂ ಮೇಬಲ್‌ನ ಇಬ್ಬರು ಹೆಣ್ಣು ಮಕ್ಕಳಿಗಿಂತ ಇವನೇ ಎಷ್ಟೋ ಮೇಲು. ನಾನು ಸಿಮ್ಲಾದಲ್ಲಿ ಇದ್ದಷ್ಟು ದಿವಸವೂ ಅವರುಗಳು ನನ್ನ ಪಾಡು ಪಡಿಸಿಬಿಟ್ಟರು."

ತಿಂಡಿ ತಿನ್ನುತ್ತಾ (ಆ ಕಾಲದಲ್ಲಿ ಊಟಕ್ಕೆ ಹಾಗೆನ್ನುತ್ತಿದ್ದರು) ಕೆನ್ ಅಂಕಲ್ ಜೀವನೋಪಾಯದ ಬಗ್ಗೆ ಬಹಳ ಗಂಭೀರವಾಗಿ ಮಾತಾಡಿದ.

ಇಡೀ ಡೆಹ್ರಾದಲ್ಲೇ ಇರೋದು ಒಂದೇ ಒಂದು ಟ್ಯಾಕ್ಸಿ ಎಂದು ಅವನು ಮನಸ್ಸಿನಲ್ಲೇ ಅಂದುಕೊಂಡು "ಖಂಡಿತ ಇನ್ನೊಂದು ಟ್ಯಾಕ್ಸಿ ಇದ್ದರೆ ಒಳ್ಳೇ ಲಾಭ ಬರುತ್ತೆ ಎಂದಾಗ "ಹೌದು, ಖಂಡಿತ ಇದೆ ಎಂದು ಅನಿಸುತ್ತೆ" ಎಂದಳು ಅಜ್ಜಿ. "ಆದರೆ ಅದರಿಂದ ನಿನಗೇನು? ಮೊದಲನೆಯಾದಗಿ ನಿನ್ನ ಹತ್ತಿರ ಟ್ಯಾಕ್ಸಿ ಇಲ್ಲ. ಎರಡನೆಯಾದಾಗಿ ನಿನಗೆ ಓಡಿಸೋಕೆ ಬರೋದಿಲ್ಲ."

"ನಾನು ಬೇಗ ಕಲಿತುಕೊಳ್ಳಬಲ್ಲೆ. ಊರಿನಲ್ಲಿ ಒಂದು ಡ್ರೈವಿಂಗ್ ಸ್ಕೂಲ್ ಇದೆ. ಮಾವನ ಹಳೇ ಕಾರು ಉಪಯೋಗಿಸಬಹುದು. ಅದು ಗ್ಯಾರೇಜಿನಲ್ಲಿ ಎಷ್ಟೋ ವರುಷಗಳಿಂದ ಧೂಳು ಹಿಡಿದು ಕೂತಿದೆ." (ಅವರು ಅಜ್ಜನ ಪುರಾತನ ಹಿಲ್‌ಮನ್ ರೋಡ್ ಸ್ಟಾರ್ ಕಾರಿನ ಬಗ್ಗೆ ಹೇಳುತ್ತಿದ್ದರು. ಅದು 1925ರ ಮಾದರಿ, 20ವರುಷಗಳ ಹಿಂದೆ ತಯಾರಿಸಿದ್ದು)".

"ನನಗಂತೂ ಅದು ಈಗ ಓಡುತ್ತೆ ಅಂತ ಅನ್ನಿಸೊಲ್ಲ" ಅಜ್ಜಿ ಅಂದಳು. "ಹಾಗಂದ್ರೇನು, ಓಡೇ ಓಡುತ್ತೆ. ಅದಕ್ಕೆ ಸ್ವಲ್ಪ ಎಣ್ಣೆ, ಗ್ರೀಸು ಮತ್ತು ಅಲ್ಲಲ್ಲಿ ಬಣ್ಣ ಹಚ್ಚಬೇಕು ಅಷ್ಟೆ."

"ಹಾಗೇ ಆಗಲಿ, ಗಾಡಿ ಓಡಿಸೋದನ್ನ ಮೊದಲು ಕಲಿತುಕೋ, ರೋಡ್‌ಸ್ಟಾರ್ ಬಗ್ಗೆ ಆಮೇಲೆ ವಿಚಾರಮಾಡೋಣ."

ಅದರಂತೆ ಕೆನ್ ಅಂಕಲ್ ಡ್ರೈವಿಂಗ್ ಸ್ಕೂಲ್ ಸೇರಿಕೊಂಡರು. ಅವರು ನಿಯಮಿತವಾಗಿ ನಿತ್ಯವೂ ಸಾಯಂಕಾಲ ಒಂದು ಘಂಟೆ ಕಲಿಯಲು ಹೋಗುತ್ತಿದ್ದರು. ಅಜ್ಜಿ ಶುಲ್ಕ ಕೊಡುತ್ತಿದ್ದಳು. ಒಂದು ತಿಂಗಳಾದ ನಂತರ ಕೆನ್ ಅಂಕಲ್ ತಾವು ಗಾಡಿ ಡ್ರೈವ್ ಮಾಡಬಲ್ಲರೆಂದು ಘೋಷಿಸಿದರು ಮತ್ತು ರೋಡ್‌ಸ್ಟಾರ್‌ಅನ್ನು ಓಡಿಸಿ ಪರೀಕ್ಷಿಸಲು ತೆಗೆದುಕೊಂಡು ಹೋಗುವುದಾಗಿ ಹೇಳಿದರು.

"ನಿನಗಿನ್ನೂ ಲೈಸನ್ಸ್ ಸಹ ಸಿಕ್ಕಿಲ್ಲ" ಅಜ್ಜಿ ಅಂದಳು. "ನಾನು ಅದನ್ನು ಬಹಳ ದೂರ ತಗೊಂಡು ಹೋಗೊಲ್ಲ" ಕೆನ್ ಅಂಕಲ್ ಹೇಳಿದರು. "ರಸ್ತೆ ಕೆಳಗಿನವರೆಗೂ ಹೋಗಿ ಹಿಂದಕ್ಕೆ ಬರ್ತೀನಿ" ಅವರು ಬೆಳಿಗ್ಗೆ ಪೂರ್ತಿ ಕಾರನ್ನು ಸ್ವಚ್ಛಗೊಳಿಸುವುದರಲ್ಲಿ ಮಗ್ನರಾಗಿದ್ದರು. ಅಜ್ಜಿ ಅವರಿಗೆ ಒಂದು ಡಬ್ಬ ಪೆಟ್ರೋಲ್‌ಗಾಗಿ ಹಣಕೊಟ್ಟಳು. ಟೀ ಕುಡಿದನಂತರ ಕೆನ್ ಅಂಕಲ್ ನನ್ನನ್ನು ಕರೆದು ಹೇಳಿದರು "ಬಾರೋ, ರಸ್ಕಿ. ಕಾರೊಳಕ್ಕೆ ಹಾರು, ನಾನು ನಿನ್ನನ್ನು ಕಾರಲ್ಲಿ ಕರೆದುಕೊಂಡು ಹೋಗ್ತೀನಿ. ಮೋಹನನನ್ನೂ ಜೋತೇಲಿ

ಕರೆದುಕೊಂಡು ಬಾ''. ಮೋಹನ್ ಮತ್ತು ನಾನು ಯಾವುದೇ ಆಪತ್ತಿಗೆ ಒಳಗಾಗಲು ಸಿದ್ಧರಿರಲಿಲ್ಲ. "ಈಗ ಬೇಡ ಮುಂದಿನ ಸಲ ಬರ್ತೀವಿ, ಕೆನ್ ಅಂಕಲ್'' ನಾನೆಂದೆ."ಈಗ, ನೀನು ಕಾರನ್ನು ವೇಗವಾಗಿ ಓಡಿಸಬೇಡ'' ಅಜ್ಜಿ ಹೇಳಿದಳು, "ನಿನ್ನಗಿನ್ನೂ ಕಾರ್ ಬಿಡುವುದು ಸರಿಯಾಗಿ ಅಭ್ಯಾಸವಾಗಿಲ್ಲ'' ಕೆನ್ ಅಂಕಲ್ ತಲೆ ಅಲ್ಲಾಡಿಸಿ ಮುಗುಳ್ನಕ್ಕರು ಮತ್ತು ಎರಡು ಬಾರಿ ಹಾರನ್ ಅನ್ನು ಕಹಳೆಯಂತೆ ಬಾರಿಸಿದರು. ಅವರು ತಮ್ಮಷ್ಟಕ್ಕೆ ತಾವೇ ಸಂತೋಷಪಟ್ಟುಕೊಂಡರು. ಮಿಸ್ ಕೆಲ್ನೆರ್ ಸಾಯಂಕಾಲ ವಾಕಿಂಗ್‌ಗಾಗಿ ಹೊರಟಿದ್ದವಳು, ಕೆನ್ ಅಂಕಲ್ ರೋಡ್‌ಸ್ಟಾರ್ ನಡೆಸುತ್ತಿದ್ದುದನ್ನು ಕಂಡು ಪುನಃ ಒಳಕ್ಕೆ ಹೊಕ್ಕಳು. ಕೆನ್ ಅಂಕಲ್ ಕಾರನ್ನು ಸೀದಾ ನಡೆಸುತ್ತಿದ್ದರು ಮತ್ತು ವೇಗವಾಗಿ ಹೋಗುತ್ತಿದ್ದರು. ಒಂದೇ ಸಮನೆ ನಿಲ್ಲಿಸದೆ ಹಾರನ್ ಬಾರಿಸುತ್ತಿದ್ದರು. ರಸ್ತೆಯ ಕೊನೆಯಲ್ಲಿ ಒಂದು ತಿರುವಿತ್ತು. "ನಾನು ಕಾರನ್ನು ಹಿಂದಕ್ಕೆ ತಿರುಗಿಸಿಕೊಂಡು ಒಯ್ಯುತ್ತೇನೆ'' ಎಂದರು. ಕೆನ್ ಅಂಕಲ್ ಸ್ಟಿಯರಿಂಗ್ ತಿರುಗಿಸಿದರು; ಅವರು ಆ ತಿರುವನ್ನು ಸುತ್ತಲು ಶುರು ಮಾಡಿದರು; ಆದರೆ ಸ್ಟೀಯರಿಂಗ್ ಚಕ್ರ, ಕೆನ್ ಮಾವ ಎಷ್ಟು ತಿರುಗಿಸಲು ಯೋಚಿಸಿದ್ದರೋ ಅಷ್ಟಂತೂ ತಿರುಗಲೇ ಇಲ್ಲ. ಅಷ್ಟೇಕೆ ಅದು ತಿರುಗುತ್ತಲೇ ಇರಲಿಲ್ಲ... ಆದ್ದರಿಂದ ಸುತ್ತು ಹಾಕುವ ಬದಲು ಅವರು ಬಲಕ್ಕೆ ತಿರುಗಿಕೊಂಡು ಸೀದಾ ಗುಲ್‌ಶನ್ ಮಹಾರಾಜರ ತೋಟದ ಗೋಡೆಯತ್ತ ಹೊರಟರು. ಅದು ಒಂದು ಇಟ್ಟಿಗೆ ಗೋಡೆ, ರೋಡ್‌ಸ್ಟಾರ್ ಅದಕ್ಕೆ ಜೋರಾಗಿ ಡಿಕ್ಕಿ ಹೊಡೆದು ಇನ್ನೊಂದು ಪಕ್ಕದಿಂದ ಹೊರಬಂತು. ಕಾರಿಗಾಗಲಿ ಅದರಲ್ಲಿದ್ದವರಿಗಾಗಲಿ ಏನೂ ಹಾನಿ ಆಗಲಿಲ್ಲ. ಕೆನ್ ಅಂಕಲ್ ಕಾರನ್ನು ಮಹಾರಾಜರ ಲಾನ್‌ನ ಮಧ್ಯಕ್ಕೆ ತಂದು ಹಾಗೂ ಹೀಗೂ ನಿಲ್ಲಿಸಿದರು. ಹುಲ್ಲು ಮೈದಾನದಲ್ಲಿ ಅತ್ತಿಂದಿತ್ತ ಓಡಾಡುತ್ತಿದ್ದವರು ಮಹಾರಾಜರೇ ಆಗಿದ್ದರು. ಅವರ ಸುತ್ತು ಕಾರ್ಯದರ್ಶಿಗಳು ಮತ್ತು ಕೈ ಕೆಳಗಿನವರು ಇದ್ದರು.

ಕಾರ್‌ನ ಸ್ಟಿಯರಿಂಗ್ ಹಿಡಿದಿದ್ದ ಕೆನ್ ಅಂಕಲ್ ಅನ್ನು ಕಂಡು ಮಹಾರಾಜರು ಆನಂದದಿಂದ ಹಿಗ್ಗಿದರು. "ಏನಯ್ಯಾ ಹುಡುಗಾ, ನಿನ್ನನ್ನು ನೋಡಿ ಬಹಳ ಖುಷಿಯಾಯಿತು.'' ಎಂದು ಉದ್ಗಾರ ತೆಗೆದರು. "ನೀನು ಬಂದಿದ್ದು ಬಹಳ ಒಳ್ಳೇದಾಯಿತು. ಟೆನ್ನಿಸ್ ಆಡೋಣವೇನಯ್ಯಾ?'' ಎಂದು ಕೇಳಿದರು.

# ಕ್ರಿಕೆಟ್ ಪಟು ಕೆನ್ ಅಂಕಲ್

ಕೆನ್ ಅಂಕಲ್ ಮೇಲೆ ಮಹಾರಾಜರ ಕೃಪಾದೃಷ್ಟಿ ಮತ್ತೊಮ್ಮೆ ಬಿದ್ದರೂ, ಅವರಿಗೆ ಕೆಲಸವಂತೂ ಸಿಕ್ಕಿರಲಿಲ್ಲ. ಹಿಲ್ಮನ್ ಅನ್ನು ಪುನಃ ಹೊರಗೆ ತೆಗೆದುಕೊಂಡು ಹೋಗಲು ಅಜ್ಜಿ ಒಪ್ಪಿಗೆ ಕೊಡಲಿಲ್ಲ. ಆದ್ದರಿಂದ ಕೆನ್ ಅಂಕಲ್ ಮುನಿಸಿಕೊಂಡಿದ್ದರು. ಅದೆಲ್ಲಾ ಅಜ್ಜನ ತಪ್ಪು, ಅವರಿನ್ನೂ ಬದುಕಿದ್ದಾಗ, ಹತ್ತುವರುಷಗಳ ಹಿಂದೆ, ಸ್ಟೀರಿಂಗ್ ಚಕ್ರದ ಬಗ್ಗೆ ಗಮನ ಕೊಡದೇ ಇದ್ದದ್ದು ಎಂದು ಹೇಳಿದರು. ಕೆನ್ ಅಂಕಲ್ ಎರಡು ಘಂಟೆಗಳ ಕಾಲ ಉಪವಾಸ ಸತ್ಯಾಗ್ರಹ ಮಾಡಿದರು (ಊಟ ಮತ್ತು ಟೀಯ ಮಧ್ಯದಲ್ಲಿ) ಅಲ್ಲದೆ ಅವರು ಅನೇಕ ದಿವಸಗಳವರೆಗೆ, ಸಿಳ್ಳೆ ಹೊಡೆದಿದ್ದೇ ನಮಗೆ ಕೇಳಿ ಬಂದಿರಲಿಲ್ಲ. "ಸಧ್ಯ ಗಲಾಟೆ ಇಲ್ಲದೇ ಇರುವುದು ನಮ್ಮ ಪುಣ್ಯ" ಅಜ್ಜಿ ಅಂದಳು. ನಂತರ ಅವರು ಎಮಿಲಿ ಅತ್ತೆ ಜೊತೆ ಇರಲು ಲಕ್ನೋಗೆ ಹೋಗುವುದಾಗಿ ಹೇಳಿದರು. ಮಕ್ಕಳನ್ನು ಜೊತೆಗೆ ಒಂದು ಪಾಠಶಾಲೆಯನ್ನು ಅವಳು ನೋಡಿಕೊಳ್ಳಬೇಕು. ಆದ್ದರಿಂದ ಹೆಚ್ಚುದಿನ ಅಲ್ಲಿ ಇರಬೇಡ ಎಂದಳು ಅಜ್ಜಿ. "ನಾನೆಷ್ಟು ದಿವಸವಿದ್ದರೂ ಅವಳೇನೂ ಬೇಜಾರು ಮಾಡಿಕೊಳ್ಳುವುದಿಲ್ಲ" ಕೆನ್ ಅಂಕಲ್ ಸಿಡುಕಿಕೊಂಡು ಹೇಳಿದರು ಮತ್ತು ಅಲ್ಲಿಂದ ಹೊರಟು ಹೋದರು.

ಅವರ ಲಕ್ನೋ ಪ್ರವಾಸ ಮರೆಯಲಾರದ್ದು. ಎಷ್ಟೋ ದಿನಗಳ ನಂತರ ಇದು ನಮಗೆ ತಿಳಿಯಿತು. ಕೆನ್ ಅಂಕಲ್ ಲಕ್ನೋ ಸ್ಟೇಷನ್‌ನಲ್ಲಿ ಇಳಿದ ಕೂಡಲೇ ಒಂದು ದೊಡ್ಡ ಗುಂಪು ಅವರನ್ನು ಸುತ್ತುವರಿಯಿತು. ಪ್ರತಿಯೊಬ್ಬರೂ ಅವರನ್ನು ಕಂಡು ಕೈಬೀಸುತ್ತಿದ್ದರು. ಹಿಂದಿ, ಉರ್ದು ಮತ್ತು ಇಂಗ್ಲಿಷ್‌ನಲ್ಲಿ ಜನರು ಸ್ವಾಗತದ ಘೋಷಣೆಗಳನ್ನು ಗಟ್ಟಿಯಾಗಿ ಕೂಗುತ್ತಿದ್ದರು. ಇದೆಲ್ಲಾ ಏನು ಎಂದು ತಿಳಿದುಕೊಳ್ಳುವ ಮುಂಚೆಯೇ ಅವರು ಚೆಂಡು ಹೂವಿನ ಹಾರಗಳಿಂದ ಮುಚ್ಚಿ ಹೋಗಿದ್ದರು. ಒಬ್ಬ ಯುವಕ ಮುಂದೆ ಬಂದು ಗೋಮತಿ ಕ್ರಿಕೆಟ್ ಸಮಿತಿ ನಿಮ್ಮನ್ನು ಐತಿಹಾಸಿಕ ಲಕ್ನೋನಗರಕ್ಕೆ ಸ್ವಾಗತಿಸುತ್ತದೆ ಎಂದು ಸಾರಿದ. ಕೆನ್

ಮಾವನನ್ನು ಸ್ಟೇಷನ್‌ನ ಹೊರಗೆ ಅವರಿಗಾಗಿ ಕಾದಿದ್ದ ಕಾರಿನ ಹತ್ತಿರಕ್ಕೆ ಕರೆದುಕೊಂಡು ಹೋದ.

ಆ ಕಾರು ಕ್ರೀಡಾಂಗಣವನ್ನು ತಲುಪಿತು. ಆಗ ಕೆನ್ ಮಾವನಿಗೆ ಅರಿವಾಯಿತು. ತಾವು ಕ್ರಿಕೆಟ್ ಮ್ಯಾಚ್ ಆಡಬೇಕಾಗಿದೆ ಎಂಬುದು. ಅದು ನಡೆದದ್ದು ಹೀಗೆ. ಬ್ರೂಸ್ ಹ್ಯಾಲೆಮ್, ಎಂಬ ಪ್ರಸಿದ್ಧ ಇಂಗ್ಲಿಷ್ ಆಟಗಾರ ಇಂಡಿಯ ಪ್ರವಾಸ ಮಾಡುತ್ತಿದ್ದರು ಮತ್ತು ಅವರು ಲಕ್ನೋದಲ್ಲಿ ಸಹಾಯಾರ್ಥ ಮ್ಯಾಚ್ ಆಡಲು ಒಪ್ಪಿಕೊಂಡಿದ್ದರು. ಆದರೆ ಹಿಂದಿನ ಸಾಯಂಕಾಲ, ಡೆಲ್ಲಿಯಲ್ಲಿ ಮಿ.ಹ್ಯಾಲೆಮ್ ಹೊಟ್ಟೆನೋವೆಂದು ಮಲಗಿದವರು ರೈಲು ಬರುವ ಸಮಯಕ್ಕೆ ಏಳಲಾಗಲಿಲ್ಲ. ಲಕ್ನೋ ಪಂದ್ಯದ ವ್ಯವಸ್ಥಾಪಕರಿಗೆ ಈ ಬಗ್ಗೆ ತಂತಿ ಕಳುಹಿಸಲಾಗಿತ್ತು. ಆದರೆ ಎಷ್ಟೋ ತಂತಿಗಳಂತೆ, ಇದು ಕೂಡಾ ಅವರಿಗೆ ತಲುಪಲಿಲ್ಲ. ಕ್ರಿಕೆಟ್ ಅಭಿಮಾನಿಗಳು, ಮಹಾನ್ ಆಟಗಾರರನ್ನು ಸ್ವಾಗತಿಸಲು ಗುಂಪುಗುಂಪಾಗಿ ನಿಲ್ದಾಣಕ್ಕೆ ಬಂದಿದ್ದರು. ಆಶ್ಚರ್ಯವೆಂದರೆ ಕೆನ್ ಅಂಕಲ್ ಬ್ರೂಸ್ ಹ್ಯಾಲೆಮ್‌ರನ್ನೇ ಹೋಲುತ್ತಿದ್ದರು. ಅವರಂತೆಯೇ ಇವರಿಗೂ ಬಕ್ಕತಲೆ ಇತ್ತು. ಅದಕ್ಕೆ ಈ ಅವ್ಯವಸ್ಥೆ. ಅದೂ ಅಲ್ಲದೆ ಇಂತಹ ಒಂದು ತೊಡಕು ಹಾಗೂ ಪೇಚಿನ ಪರಿಸ್ಥಿತಿಗೆ ಸಿಕ್ಕಿಹಾಕಿಕೊಂಡು ಒದ್ದಾಡುವುದೆಂದರೆ ಕೆನ್ ಅಂಕಲ್‌ಗೆ ವಿಪರೀತ ಹುರುಪು. ಗೋಮತಿ ಕ್ರಿಕೆಟ್ ಸಮಿತಿಯವರಿಂದ ಸ್ವಾಗತ, ಭವ್ಯ ಆದರೋಪಚಾರ, ಕ್ರೀಡಾಂಗಣದಲ್ಲಿ ಸೊಗಸಾದ ಬೆಳಗಿನ ಉಪಾಹಾರ, ಇವೆಲ್ಲವುಗಳ ಪ್ರಭಾವದಿಂದ ಕ್ರಿಕೆಟ್ ಆಟ ಆಡಲು ಒಪ್ಪಿಕೊಳ್ಳದಿದ್ದರೆ ತನ್ನ ಕಡೆಯಿಂದ ಅನ್ಯಾಯವಾದಂತೆ ಎಂದು ಕೆನ್ ಅಂಕಲ್‌ಗೆ ಅನ್ನಿಸಿತು. "ನಾನು ಒಂದು ಟೆನ್ನಿಸ್ ಚೆಂಡು ಹೊಡೆಯಬಲ್ಲನಾದರೆ ಕ್ರಿಕೆಟ್ ಬಾಲ್ ಸಹ ಹೊಡಯಬಲ್ಲೆ" ಎಂದುಕೊಂಡರು. ಅದೃಷ್ಟಕ್ಕೆ ತಕ್ಕಂತೆ ಅವರ ಪೆಟ್ಟಿಗೆಯಲ್ಲಿ ಒಂದು ಜೊತೆ ಬಿಳಿ ಬಟ್ಟೆ ಮತ್ತು ಆಟದ ಕೋಟು ಇದ್ದವು. ಗೋಮತಿ ತಂಡ ನಾಣ್ಯ ಚಿಮ್ಮಿ ಟಾಸ್ ಗೆದ್ದಾಗ, ಬ್ಯಾಟ್ ಮಾಡಲು ನಿರ್ಧರಿಸಿತು. ಬ್ಯಾಟ್ ಮಾಡಲು ಬ್ರೂಸ್ ಹ್ಯಾಲೆಮ್‌ನ ಕ್ರಮಬದ್ಧ ಸ್ಥಾನದ ಪ್ರಕಾರ ಕೆನ್ ಅಂಕಲ್ ಮೂರನೆಯವರಾಗಿ ಹೋಗಬೇಕಾಗಿತ್ತು. ಅವರು ಈ ಪ್ರಪಂಚದಲ್ಲಿ ಯಾಕೆ ಇನ್ನೂ ಆರಾಮವಾದ ಪ್ಯಾಡ್‌ಗಳನ್ನು ಮಾಡಿಲ್ಲವೋ ಎಂದು ವಿಸ್ಮಯ ಪಡುತ್ತಾ ವಿಕೆಟಿನ ಬಳಿ ನಡೆದು ಹೋದರು. ಅವರಿಗೆ ಸಿಕ್ಕ ಮೊದಲ ಬಾಲ್ ಜಾಸ್ತಿ ಎಗರಲಿಲ್ಲ. ಆದ್ದರಿಂದ ಅವರು ಅದನ್ನು ಟೆನ್ನಿಸ್ ಬಾಲ್ ಹೊಡೆಯುವ ರೀತಿಯಲ್ಲಿ ವಿಕೆಟ್ ಮಧ್ಯದಿಂದ ಬೌಂಡರಿಗೆ ಬಾರಿಸಿದರು. ಜನಸಮೂಹ ಪ್ರಶಂಸಿಸುತ್ತಾ ಪ್ರೋತ್ಸಾಹಿಸಿತು.

ಮುಂದಿನ ಚೆಂಡು ಕೆನ್ ಅಂಕಲ್‌ನ ಪ್ಯಾಡಿಗೆ ತಗಲಿತು. ಅವರು ವಿಕೆಟ್‌ನ ಮುಂದೆ ಇದ್ದರು, ಅದನ್ನು ಕಾಲಿನ ಪಕ್ಕದಲ್ಲಿ ಹೋಗಲು ಬಿಡಬೇಕಾಗಿತ್ತು. ಆದರೆ ಅಂಪೈರ್ ತಮ್ಮ ಬೆರಳು ಎತ್ತಲು ಅನುಮಾನಿಸಿದರು. ದುಡ್ಡು ಕೊಟ್ಟು ಬ್ರೂಸ್ ಹ್ಯಾಲೆಮ್ ಆಡುವುದನ್ನು ನೋಡಲು ಬಂದಿರುವ ನೂರಾರು ಜನ ಕ್ರೀಡಾಭಿಮಾನಿಗಳಿಗೆ

ಆಶಾಭಂಗವುಂಟುಮಾಡುವುದು ನಾಚಿಕೆಗೇಡಲ್ಲವೆ! "ಔಟಾಗಿಲ್ಲ" ಅಂಪೈರ್ ಹೇಳಿದರು.

ಮೂರನೆ ಚೆಂಡು ಕೆನ್ ಅಂಕಲ್‌ನ ಬ್ಯಾಟಿನ ಅಂಚಿಗೆ ತಗಲಿ ವೇಗವಾಗಿ ಪಾರಾಯಿತು. "ಸೊಗಸಾದ ಗುರಿ!"

ಪೆವಿಲಿಯನ್‌ನಲ್ಲಿ ಕುಳಿತಿದ್ದ ವೃದ್ಧ ಮಹನೀಯರೊಬ್ಬರು ಉದ್ಗರಿಸದರು. "ಅದ್ಭುತವಾದ ಲೇಟ್‌ಕಟ್ಸ್" ಇನ್ನೊಬ್ಬರೆಂದರು. ಚೆಂಡು ಬೌಂಡರಿ ಮುಟ್ಟಿತು. ಕೆನ್ ಅಂಕಲ್ ಹೆಸರಿನಲ್ಲಿ ನಾಲ್ಕು ರನ್ನುಗಳಾದವು. ಅಷ್ಟರಲ್ಲಿ ಓವರ್ ಮುಗಿಯಿತು. ಇನ್ನೊಬ್ಬ ಆಟಗಾರ ಚೆಂಡನ್ನು ಎದುರಿಸಬೇಕಾಗಿತ್ತು. ಅವನು ಮೊದಲ ಒಂದು ರನ್ ಮಾಡಿ ಇನ್ನೊಂದು ರನ್ನಿಗೆ ಕೂಗಿದ. ಕೆನ್ ಅಂಕಲ್‌ಗೆ ಒಂದೇ ರನ್ ಸಾಕು ಎನ್ನಿಸಿತು. ಯಾಕೆ ಸುಮ್ಮನೆ ಆ ಕಡೆಯಿಂದ ಈ ಕಡೆ ಹುಚ್ಚನಂತೆ ಓಡೋ ಪಾರುಪತ್ಯ. ಆದರೆ ಅವರು ಓಡದೆ ಇರುವಂತಿಲ್ಲ; ಮತ್ತು ಅವರು ಅರ್ಧ ಪಿಚ್‌ಗೆ ಬಂದಿದ್ದಾಗ ಫೀಲ್ಡರ್ ಎಸೆದ ಚೆಂಡು ವಿಕೆಟ್‌ಗೆ ತಗುಲಿತು. ಕೆನ್ ಅಂಕಲ್ ಗಜಗಳಷ್ಟು ಹಿಂದಿದ್ದಾಗಲೆ ರನ್ ಔಟ್ ಆದರು. ಈ ಸಾರಿ ಯಾವ ಸಂಶಯವೂ ಇರಲಿಲ್ಲ. ಅವರು ಪೆವಿಲಿಯನ್‌ಗೆ ಹಿಂದಿರುಗಿದಾಗ ಪ್ರೇಕ್ಷಕರು ಅನುಕಂಪದಿಂದ ಚಪ್ಪಾಳೆ ತಟ್ಟಿದರು. "ಅವರದೇನೂ ತಪ್ಪಿಲ್ಲ" ವೃದ್ಧ ಮಹನೀಯರು ಅಂದರು. "ಇನ್ನೊಬ್ಬ ಆಸಾಮಿ ಕರೆಯಬಾರದಾಗಿತ್ತು. ಇನ್ನೊಂದು ರನ್ ಆಗೋಕೆ ಅವಕಾಶವಿರಲಿಲ್ಲ. ಅಂತೂ ಕಾನ್‌ಪುರ್‌ನಿಂದ ಇಲ್ಲಿಗೆ ಬಂದದ್ದು ಸಾರ್ಥಕವಾಯಿತು. ಇಂಥ ಉತ್ತಮ ಆಟ ನೋಡುವ ಅವಕಾಶ ದೊರೆಯಿತು".

ಕೆನ್ ಅಂಕಲ್ ಹೊಟ್ಟೆ ತುಂಬಾ ಊಟ (ಮಧ್ಯಾಹ್ನದಲ್ಲಿ ಮಾಡುವ) ಮಾಡಿ ಅದರ ಆನಂದವನ್ನು ಪೂರ್ಣವಾಗಿ ಸವಿದರು. ಗೋಮತಿ ತಂಡ ಬಹುಶಃ ಮಧ್ಯಾಹ್ನವೆಲ್ಲಾ ಫೀಲ್ಡ್ ಮಾಡಲು ಹೆಚ್ಚು ಓಡಾಡಬೇಕಾಗಬಹುದೆಂದು ಗ್ರಹಿಸಿ ಪೆವಿಲಿಯನ್‌ನಿಂದ ಮೆಲ್ಲನೆ ಜಾರಿಕೊಂಡು ಕ್ರೀಡಾಂಗಣವನ್ನು ಬಿಟ್ಟರು. ಕಂಟೋನ್ಮೆಂಟ್‌ನಲ್ಲಿದ್ದ ಎಮಿಲಿ ಚಿಕ್ಕಮ್ಮನ ಮನೆಗೆ ಒಂದು ಟಾಂಗಾ ಮಾಡಿಕೊಂಡು ಹೋದರು. ಅವರು ಎರಡನೇ ಊಟದ (ಒಂದು ಘಂಟೆಗೆ ಮಾಡುವ ಊಟ) ಹೊತ್ತಿಗೆ ಸರಿಯಾಗಿ ಅಲ್ಲಿದ್ದರು; ಎಮಿಲಿ ಚಿಕ್ಕಮ್ಮನ ಕುಟುಂದವರೊಡನೆ ಊಟ ಮಾಡಲು ಸಿದ್ಧರಾಗಿದ್ದರು. ಸ್ಟೇಡಿಯಮ್ನಲ್ಲಿ 'ಬ್ರೂಸ್ ಹ್ಯಾಲೆಮ್ ಅಲಹಾಬಾದ್ ಗಾಡಿ ಹಿಡಿಯಲು ಬೇಗ ಹೊರಟಿರಬೇಕು, ಅಲ್ಲಿ ಇನ್ನೊಂದು ಸಹಾಯಾರ್ಥ ಪಂದ್ಯ ಆಡಬೇಕಾಗಿದೆ, ಎಂದುಕೊಂಡರು.

ಎಮಿಲಿ ಚಿಕ್ಕಮ್ಮ ಭಾರಿ ಘಾಟೀ ಹೆಂಗಸು, ಕೆನ್ ಅಂಕಲ್‌ಗೆ ಒಂದು ವಾರ ಊಟ ಹಾಕಿದ ಮೇಲೆ ಅವರನ್ನು ಪುಟ್ಟ ಮಕ್ಕಳ ಶಾಲೆಯಲ್ಲಿ ಕೆಲಸಕ್ಕಿಟ್ಟಳು. ಅಲ್ಲಿಂದ ಪಲಾಯನ ಮಾಡಿ ಅಜ್ಜಿ ಊರಿಗೆ ಹಿಂತಿರುಗುವುದಕ್ಕೋಸ್ಕರ ಹಣ ಕೂಡಿಸಲು ಅವರಿಗೆ ಸಾಕಷ್ಟು ತಿಂಗಳುಗಳೇ ಹಿಡಿದವು.

ಬ್ರೂಸ್ ಹ್ಯಾಲೆಮ್‌ನ ಸ್ಕೋರ್‌ಗೆ ನಾಲ್ಕು ರನ್ನುಗಳನ್ನು ಕೂಡಿಸಲು ತಾವು ಸಹಾಯ ಮಾಡಿದ ಸಂತೃಪ್ತ ಭಾವನೆಯಿಂದ ಅವರು ಉಬ್ಬಿಹೋಗಿದ್ದರು. ಗೋಮತಿ ಕ್ರಿಕೆಟ್ ಸಮಿತಿಯ ಅಂಕಿ ಅಂಶಗಳ ಪಟ್ಟಿಯಲ್ಲಿ ಈ ಅದ್ಭುತ ದಾಖಲೆ ಎಂದೆಂದಿಗೂ ಇರುವಂತಾಯಿತು.

ಜಿ. ಹ್ಯಾಲೆಮ್ ರನ್ ಔಟ್ 4.

ಗೋಮತಿ ತಂಡ ಆ ಪಂದ್ಯದಲ್ಲಿ ಸೋತಿತು. ಆದರೆ ಕೆನ್ ಅಂಕಲ್ ಪ್ರಕಾರ ಸೋಲುವವರಿಲ್ಲದಿದ್ದರೆ ನಾವೆಲ್ಲಿರುತ್ತಿದ್ದೆವು?



# ಮೊಂಬಾಸಾ ತಲುಪಲು ಭವ್ಯ ಯೋಜನೆಗಳು

ಶಾಲೆಯ ಪೆವಿಲಿಯನ್ ಮೇಲುಗಡೆ ಇದ್ದ ದೊಡ್ಡ ಗಡಿಯಾರ ಹನ್ನೊಂದು ಘಂಟೆ ಹೊಡೆಯುತ್ತಿದ್ದಂತೆಯೇ ನಾನು ಹಾಸಿಗೆಯಿಂದ ಹೊರ ಬಂದು ನನ್ನ ವ್ಯಾಯಾಮದ ಶೂಸ್‌ನಲ್ಲಿ ಕಾಲು ತೂರಿಸಿಕೊಂಡು ನಿಶ್ಯಬ್ದವಾಗಿ ನಿದ್ರಾಶಾಲೆಯಿಂದ ಉದ್ದಕ್ಕೂ ನಡೆದುಬಂದೆ. ಬಾಗಿಲ ಬಳಿ ಬಂದು ನಿಂತು ಯಾರೂ ಎಚ್ಚರವಾಗಿಲ್ಲವೆನ್ನುವುದನ್ನು ಖಚಿತ ಮಾಡಿಕೊಳ್ಳಲು ನೋಡಿದೆ. ಕತ್ತಲು ಕೋಣೆಯಲ್ಲಿ ಹಿಂದಕ್ಕೆ ತಿರುಗಿ ನಂತರ ಬೇಗ ಬೇಗ ವೆರಾಂಡದುದ್ದಕ್ಕೂ ನಡೆದುಬಂದೆ. ಮೆಟ್ಟಲಿಂದ ಕೆಳಗೆ ಇಳಿದೆ. ಅಷ್ಟು ಹೊತ್ತಿಗಾಗಲೇ ದಲ್‌ಜಿತ್ ವೆರಾಂಡದಲ್ಲಿದ್ದ. ಅವನು ಒಬ್ಬ ಸಿಖ್. ರಾತ್ರಿಯಾಗಿದ್ದರಿಂದ ಅವನು ಪಗಡಿ ತೆಗೆದಿದ್ದ. ಅವನು ತನ್ನ ಉದ್ದನೆಯ ತಲೆಗೂದಲನ್ನು ನೆತ್ತಿಯ ಮೇಲೆ ಗಂಟು ಕಟ್ಟಿದ್ದ. ಆ ಕತ್ತಲಲ್ಲಿ ಅವನು ಹಾಕಿಕೊಂಡಿದ್ದ ಬಿಳಿ ಪರಾಯಿ ಅಪಾಯ ಸೂಚಕ ಬೆಳಕಿನಂತೆ ಕಾಣುತ್ತಿತ್ತು. ನಮ್ಮ ಮೇಷ್ಟ್ರುಗಳು ಅಲ್ಲೇನಾದರೂ ಇದ್ದಿದ್ದರೆ, ನಾವು ಖಂಡಿತ ಅವರ ಕಣ್ಣಿಗೆ ಬೀಳದೆ ಇರುತ್ತಿರಲಿಲ್ಲ. ಅವನು ನನ್ನನ್ನು ನೋಡಿದ ಕೂಡಲೆ ತನ್ನ ತುಟಿಗಳ ಮೇಲೆ ಬೆರಳಿಟ್ಟ. ನಾನು ಸಾಕಷ್ಟು ಜಾಗರೂಕತೆಯಿಂದ ಇದ್ದೆ. ದಲ್‌ಜೀತ್ ಒಳಗೊಳಗೇ ಆನಂದಪಡುತ್ತಿದ್ದುದಲ್ಲದೇ ಎಲ್ಲವನ್ನೂ ರಹಸ್ಯವಾಗಿಡಲು ಪ್ರಯತ್ನಿಸುತ್ತಿದ್ದ.

ತುದಿಗಾಲಲ್ಲಿ ನಡೆಯಲು ದಲ್‌ಜೀತ್‌ಗೆ ಸಾಧ್ಯವಿರಲಿಲ್ಲ. ಅವನಿಗೆ ದೊಡ್ಡ ಪಾದಗಳಿದ್ದವು. ಆದರಿಂದಾಗಿ ಅವನು ಆಗಾಗ್ಗೆ ಕೀಟಲೆಗೆ ಒಳಗಾಗುತ್ತಿದ್ದ. ಪಂಜಾಬಿಯಲ್ಲಿ ಒಂದು ಗಾದೆ ಇದೆ; ದೊಡ್ಡ ಪಾದವಿದ್ದರೆ ಮೈ ಮುರಿದು ಕೆಲಸಮಾಡುವುದರಲ್ಲಿ ಮಾತ್ರ ನಿಸ್ಸೀಮ ಎಂದು – ದಲ್‌ಜೀತ್ ಇದನ್ನು ಒಪ್ಪುತ್ತಿರಲಿಲ್ಲ.

ಅವನ ಪ್ರಕಾರ, ದೊಡ್ಡ ಪಾದಗಳಿದ್ದವರು ತುಂಬಾ ಪ್ರಯಾಣ ಮಾಡುವರು; ಅವನು ಈಗ ತನ್ನ ಅಭಿಪ್ರಾಯವನ್ನು ಸಾಬೀತು ಪಡಿಸಲು ಹೊರಟಿದ್ದ. ನಾವು ನಿಶ್ಶಬ್ಧವಾಗಿ

ಪೆವಿಲಿಯನ್ ಎದುರು ಇದ್ದ ಮನೆಕಡೆ ಓಡಿದೆವು. ಆಗ ಮಳೆಗಾಲದ ದಟ್ಟ ಮೋಡ ತಲೆಯ ಮೇಲೆ ಕವಿದಿತ್ತು. ಪೆವಿಲಿಯನ್ ಮೆಟ್ಟಿಲುಗಳನ್ನು ಓಡುತ್ತಾ ಇಳಿದು, ನಾವು ವ್ಯಾಯಾಮ ಶಾಲೆಯ ಒಳಕ್ಕೆ ಬಂದೆವು.

ವ್ಯಾಯಾಮ ಶಾಲೆಯ ಬಾಗಿಲು ಸಾಮಾನ್ಯವಾಗಿ ತೆರೆದಿರುತ್ತಿತ್ತು. ಜುಂಗಿನ ಚಾಪೆ, ಬಣ್ಣ ಮತ್ತು ಬೆವರಿನ ವಾಸನೆಯಿಂದ ತುಂಬಿದ್ದ ಆ ಜಾಗದಲ್ಲಿ ನಾವು ರಾತ್ರಿಯ ಸಭೆ ನಡೆಸುತ್ತಿದ್ದೆವು. ಶಾಲೆಯಿಂದ ಓಡಿಹೋಗುವ ಮುಂಚೆ ಇದು ನಮ್ಮ ಕಡೆಯ ಗೋಷ್ಠಿಯಾಗಿತ್ತು.

"ನೀನು ಎಲ್ಲಾ ತಯಾರು ಮಾಡಿದ್ದೀಯಾ?" ಒಂದು ಮೇಣದ ಬತ್ತಿ ತುಂಡನ್ನು ಹಚ್ಚಿ, ನಮ್ಮಿಬ್ಬರ ನಡುವೆ ನೆಲದ ಮೇಲೆ ಇಡುತ್ತಾ ದಲ್‌ಜೀತ್ ಕೇಳಿದ. ನಾವು ಕಾಲುಗಳನ್ನು ಒಂದರ ಮೇಲೊಂದು ಅಡ್ಡಲಾಗಿ ಹಾಕಿಕೊಂಡು ಎದಿರು ಬದಿರಾಗಿ ಕುಳಿತಿದ್ದೆವು. ಒಳ್ಳೆಯ ಸ್ವಭಾವವನ್ನು ಹೊರಸೂಸುತ್ತಿದ್ದ ದಲ್‌ಜೀತ್‌ನ ಗುಂಡಗಿನ ಮುಖ, ಮೇಣದಬತ್ತಿಯ ಬೆಳಕಿನಿಂದ ಕಾಂತಿಯುತವಾಗಿತ್ತು. "ಹೌದು, ಎಲ್ಲಾ ತಯಾರಾಗಿದೆ," ನಾನೆಂದೆ."ಒಂದು ಚಾಕು, ಎರಡು ಪೊಟ್ಟಣ ಬಿಸ್ಕತ್, ಸ್ವಲ್ಪ ಬ್ರೆಡ್, ಒಂದು ಡಬ್ಬ ಸಾರ್‌ಡೈನ್ ಮೀನು ಮತ್ತು ಸ್ವಲ್ಪ ಸಿಹಿ ತಿಂಡಿ." ಹಿಂದಿನ ವಾರದ ಊಟಕ್ಕೆ ಕೊಟ್ಟಿದ್ದ ಬ್ರೆಡ್ಡನ್ನು ಉಳಿಸಿಕೊಂಡು ಇಟ್ಟಿದ್ದೆ. ಅದು ಈಗ ಹಳೆಯದಾಗಿಯೂ ಗಟ್ಟಿಯಾಗಿಯೂ ಇತ್ತು. ಆದರೆ ನಾನು ನನ್ನ ಪಟ್ಟಿಯನ್ನು ಆದಷ್ಟು ಉದ್ದವಾಗಿ ಬೆಳೆಸಿಕೊಂಡು ಹೋಗತೊಡಗಿದೆ. "ಜಾಸ್ತಿ ಏನೂ ಇಲ್ಲ". ದಲ್‌ಜೀತ್ ಅಂದ "ಮತ್ತೆ, ನಿನ್ನ ಹತ್ತಿರ ಎಷ್ಟು ದುಡ್ಡಿದೆ?"

"ಆರು ರೂಪಾಯಿಗಳು. ಅದು ಎರಡು ತಿಂಗಳುಗಳ ಜೇಬು ಖರ್ಚಿನ ಹಣ".

"ಪರವಾಗಿಲ್ಲ ರಸ್ಟಿ" ಅವನಿಗೆ ಗೊತ್ತಿತ್ತು ನನಗೆ ಹೆಚ್ಚು ಜೇಬಿನ ಖರ್ಚು ಸಿಗುತ್ತಿರಲಿಲ್ಲವೆಂದು. ಒಳ್ಳೇದು, ನನ್ನ ಹತ್ತಿರ ಮೂವತ್ತು ರೂಪಾಯಿಗಳಷ್ಟಿದೆ. ನಾವು ಹಣದ ವಿಚಾರದಲ್ಲಿ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ – ಸದ್ಯಕ್ಕಂತೂ ಬೇಡವೇ ಬೇಡ. ನನ್ನ ಹತ್ತಿರ ಚೀಸ್, ಜ್ಯಾಮ್, ಚಾಕ್‌ಲೇಟ್ ಮತ್ತು ಉಪ್ಪಿನಕಾಯಿ ಸ್ವಲ್ಪ ಸ್ವಲ್ಪ ಇವೆ. ಹಿಂದೆ ನನಗೆ ಕಳುಹಿಸಿದ ಸಾಮಾನಿನ ಗಂಟಿನಿಂದ ಉಳಿಸಿ ಇಟ್ಟು ಕೊಂಡಿರೋದು." "ಚಾಕ್‌ಲೇಟ್ ಜೊತೆ ಉಪ್ಪಿನಕಾಯಿ?"

"ಇಲ್ಲ, ಹಾಗಲ್ಲ. ನಾವು ರಸ್ತೇಲಿ ತಿನ್ನೋ ತಿಂಡಿ ಜೊತೆ ನೆಂಚಿಕೆಗೆ." ದಲ್‌ಜೀತ್‌ನ ತಂದೆ ಆಗಾಗ್ಗೆ ತಮ್ಮ ಮಗನಿಗೆ ತಿಂಡಿಗಳ ಪ್ಯಾಕೆಟ್‌ಗಳನ್ನು ಕಳಿಸುತ್ತಿದ್ದರು. ಅವನ ತಂದೆ ಪೂರ್ವ ಆಫ್ರಿಕಾದಲ್ಲಿ ವ್ಯಾಪಾರಮಾಡುತ್ತಿದ್ದರು. ದಲ್‌ಜೀತ್‌ಗೆ ಆಫ್ರಿಕಾಕ್ಕೆ ಹಿಂದಿರುಗುವ ಉದ್ದೇಶವೂ ಇತ್ತು. ಯಾಕೆಂದರೆ ಇಂಡಿಯಾದಲ್ಲಿ ಬೋರ್ಡಿಂಗ್ ಸ್ಕೂಲ್‌ನ ಜೀವನ ಅವನಿಗೆ ಸಾಕಾಗಿ ಹೋಗಿತ್ತು. ಇದೇ ಕಾರಣದಿಂದ ನಾವು ಸೇನಾ ಪಡೆಗಳನ್ನು ಸೇರಿಕೊಂಡೆವು. ನನ್ನ ಚಿಕ್ಕಪ್ಪ ಒಂದು ಸಣ್ಣ ಉಗಿ ಹಡಗಿನ ಕ್ಯಾಪ್ಟನ್ ಆಗಿದ್ದರು. ಅದು ಪೂರ್ವ ಆಫ್ರಿಕಾದಲ್ಲಿ ಮೊಂಬಾಸ ಮತ್ತು ಇಂಡಿಯಾದ ಪಶ್ಚಿಮ ಕರಾವಳಿಯಲ್ಲಿನ ಬಂದರುಗಳಾದ ಜಾಮ್‌ನಗರ್ ಅಥವಾ ದ್ವಾರಕ, ಇವುಗಳ ಮಧ್ಯೆ ಸಂಚರಿಸುತ್ತಿತ್ತು.

ಅವರ ಹಡಗು ಎಸ್.ಎಸ್.ಲ್ಯೂಸಿ. ಈ ತಿಂಗಳ ಕೊನೆಗೆ ಜಾಮ್‌ನಗರ ತಲುಪುವುದಿತ್ತು. ನಾವು ಆ ಹಡಗನ್ನು ಏರಲು ಅವರನ್ನು ಪುಸಲಾಯಿಸೋಣವೆಂದುಕೊಂಡಿದ್ದೆವು.

ದಲ್‌ಜೀತ್ ಆಫ್ರಿಕಾಕ್ಕೆ ಹಿಂತಿರುಗಲು ಇಷ್ಟಪಟ್ಟಿದ್ದ. ದಲ್‌ಜೀತ್ ತಾನಾಗಿಯೇ ವಾಪಸ್ಸಾಗಲು ಇಷ್ಟಪಟ್ಟ ಹೊರತು ಅವನನ್ನು ಭಾರತದಲ್ಲಿ ಬೋರ್ಡಿಂಗ್ ಶಾಲೆಗೆ ಕಳಿಸಬಾರದೆಂಬುದನ್ನು ಅವನ ತಂದೆ ಮನಗಂಡಿದ್ದರು. ನನಗೂ ಬೋರ್ಡಿಂಗ್ ಸ್ಕೂಲಿಗೆ ಹೋಗುವ ಇಷ್ಟವಿರಲಿಲ್ಲ. ಆದರೆ ಬೇರೆ ಕಾರಣಗಳಿಂದ, ನಿಜ. ಶಾಲೆ ಅವುಗಳಲ್ಲೊಂದಾಗಿತ್ತು. ಅಲ್ಲಿನ ಪರಿಸ್ಥಿತಿ ಡಿಕನ್ಸ್ ಡೋತ್‌ಬಾಯ್ಸ್ ಹಾಲ್‌ನಷ್ಟು ಶೋಚನೀಯವಾಗಿರದಿದ್ದರೂ ಅದೇನು ಅಷ್ಟು ಉತ್ತಮ ಶಾಲೆಯಾಗಿರಲಿಲ್ಲ. ಪ್ರಾಂಶುಪಾಲರು ಅದನ್ನು ಒಂದು ವ್ಯಾಪಾರದ ಅಂಗಡಿಯಂತೆ ನಡೆಸುತ್ತಿದ್ದರು. ಸ್ವಲ್ಪ ಹಣ ಕೊಟ್ಟು, ಹೆಚ್ಚುಲಾಭ ಪಡೆದುಕೊಳ್ಳುವ ನೀತಿ ಅವರದ್ದು. ಅವರು ನಮ್ಮಿಂದ ಹೆಚ್ಚು ಶುಲ್ಕ ತೆಗೆದುಕೊಳ್ಳುತ್ತಿದ್ದರು. ಇದಕ್ಕೆ ಬದಲಾಗಿ ಅವರು ನಮಗೆ ಒಳ್ಳೆಯ ಊಟ ಅಥವಾ ಸಮರ್ಥ ಅಧ್ಯಾಪಕರನ್ನು ಕೊಟ್ಟಿರಲಿಲ್ಲ. ಅದು ಏನೇ ಇದ್ದರೂ, ನಾವು ಹುಡುಗರು ಮಾತ್ರ ಹೀಗೆ ತಿಳಿದುಕೊಂಡಿದ್ದೆವು.

ದಲ್‌ಜೀತ್, ಆರುಂಡೇಲ್ (ಹೌದು, ಅದು ನಮ್ಮ ಶಾಲೆಯ ಹೆಸರು)ನಲ್ಲಿ ಇದ್ದದ್ದು ಸ್ವಯಂಕೃತಾಪರಾಧದ ಪರಿಣಾಮ. ಅವನು ಬೇರಾವ ಶಾಲೆಯಲ್ಲೂ ನೆಲೆಸಲಿಲ್ಲ. ಬೇರಾವ ಶಾಲೆಯಲ್ಲೂ ಇರಲು ಅವನು ನಿರಾಕರಿಸುತ್ತಿದ್ದ ಮತ್ತು ಆ ಶಾಲೆಗಳಿಂದ ಹೊರದೂಡಲ್ಪಟ್ಟ. ಅವನು ಆರುಂಡೇಲ್‌ಗೆ ಬಂದಿದ್ದ, ಅಲ್ಲಿಯೂ ಇನ್ನೂ ಮೂರು ತಿಂಗಳ ಕಾಲದಿಂದ ಬರಿ ಅವರೆ ಸಾರು ಮತ್ತು ಮಾಂಸದ ಕೊಬ್ಬಿನ ಸಾರು ಊಟಮಾಡಿ ಬೇಸತ್ತಿದ್ದ. ಅವನ ಮನಸ್ಸು ಅಲ್ಲಿಂದ ಹೊರಟು ಹೋಗಲು ಚಡಪಡಿಸುತ್ತಿತ್ತು. ಇದಾದ ಬಳಿಕ ಇನ್ಯಾವ ಶಾಲೆಗೂ ಹೋಗೋಲ್ಲ "ಅವನು ಘೋಷಿಸಿದ – ನಾನು ನೇರವಾಗಿ ನಮ್ಮ ತಂದೆಯ ನೈರೋಬಿಯಲ್ಲಿರುವ ಉದ್ಯೋಗಕ್ಕೆ ಸೇರಿಕೊಳ್ಳುತ್ತೇನೆ. ನನಗೆ ಓದಲೂ ಬರೆಯಲೂ ಬರುತ್ತೆ ಮತ್ತು ನನಗೆ ಲಾಭ ನಷ್ಟಗಳ ಮಧ್ಯದ ಅಂತರ ಗೊತ್ತು. ನನಗೆ ಬೇಕಾಗಿರೋದು ಅಷ್ಟೆ. ನೀನೇನೂ ಯೋಚಿಸಿದ್ದಿ ರಸ್ಕಿ?"

"ನಾನೊಬ್ಬ ಲೇಖಕನಾಗಬೇಕೆಂಬ ಆಸೆ" ನಾನು ಹೇಳಿದೆ.

"ನನಗೆ ಶಾಲೆಗೆ ಹೋಗಲು ಅಭ್ಯಂತರವೇನಿಲ್ಲ. ಆದರೆ ನನಗೆ ಈ ಶಾಲೆ ಇಷ್ಟ ಇಲ್ಲ. ಆದರೆ ನನ್ನ ಪೋಷಕರು ನನ್ನನ್ನು ಬೇರೆ ಶಾಲೆಗೆ ಕಳುಹಿಸುವುದಿಲ್ಲ".

ನನ್ನ ತಂದೆ ತಾಯಿ ತೀರಿಕೊಂಡಿದ್ದರು. ನನ್ನ ಪೋಷಕರು ನನ್ನನ್ನು ಆರುಂಡೇಲ್‌ಗೆ ಕಳುಹಿಸಿದ್ದರು. ಅಲ್ಲದೆ ಅವರು ನನಗಾಗಿ ಅರ್ಧಶುಲ್ಕವನ್ನು ಮಾತ್ರ ಕೊಡುತ್ತಿದ್ದರು. ಆರುಂಡೇಲಿಗೆ ಬರುವ ಮುನ್ನ ನಾನು ಬಯಲು ಪ್ರದೇಶದಲ್ಲಿ ದಿನದ ಶಾಲೆಗೆ ಹೋಗುತ್ತಿದ್ದೆ. ಆದರೆ ನನ್ನ ಪೋಷಕರಿಗೆ ನನ್ನನ್ನು ನೋಡಿಕೊಳ್ಳುವುದು ತ್ರಾಸದಾಯಕವೆನಿಸಿತ್ತು. ನಾನು ಪ್ರತಿಭಟಿಸುವ ಸ್ವಭಾವದವನು, ಮನೆಯಲ್ಲಿ

ಇರುವುದಕ್ಕಿಂತ ಪೇಟೆಯಲ್ಲಿ ಹೆಚ್ಚು ಕಾಲಕಳೆಯೋದು, ಪುರುಷ ಲಕ್ಷಣವಾಗಿ ಶಿಕಾರಿ ಮಾಡದೆ ಮನೆಯಲ್ಲಿ ಪುಸ್ತಕ ಓದುತ್ತಾ ಇರುವುದು, ಚಿಕ್ಕಪ್ಪನಂತೆ ಕಾಡುಪ್ರಾಣಿಗಳ ಶಿಕಾರಿ ಇವೆಲ್ಲಾ ನನಗಿಷ್ಟವಿರಲಿಲ್ಲ. ನನ್ನ ಪೋಷಕರಿಗೆ ನಾನು ಅಷ್ಟೊಂದು ಬೆಲೆ ಕೊಡುತ್ತಿರಲಿಲ್ಲ. (ಅವರು ನಮ್ಮ ತಾಯಿಯ ದಾಯಾದಿ)ಆದ್ದರಿಂದ ಅವರು ನನ್ನಿಂದ ಸಾಕಷ್ಟು ನಿರಾಶೆಗೊಂಡಿದ್ದರು. ಜಿಮ್ ಚಿಕ್ಕಪ್ಪ ನನ್ನ ತಂದೆಯ ತಮ್ಮ. ಅವರು ನನ್ನನ್ನು ಈ ಹಿಂದೆ ನೋಡಿದ್ದು, ನಾನು ಐದುವರುಷದ ಸಣ್ಣ ಹುಡುಗನಾಗಿದ್ದಾಗ; ನಾನೀಗ ಹನ್ನೆರಡು ವರುಷದವನು. ಜಿಮ್ ಚಿಕ್ಕಪ್ಪ ನನಗೆ ಕಾಗದ ಬರೆಯುತ್ತಿದ್ದರು ಮತ್ತು ಅವರ ಕಾಗದಗಳು ಬೇರೆ ಬೇರೆ ದೇಶದ ಬಣ್ಣ ಬಣ್ಣದ ಅಂಚೆ ಚೀಟಿಯೊಡನೆ ಸುಂದರವಾಗಿರುತ್ತಿದ್ದುವು. ಅವುಗಳು ವಾಲ್ ಪರೈಸೋ, ಸಾನ್‌ಡೈಗೋ, ಸಾನ್‌ಫ್ರಾನ್ಸಿಸ್ಕೋ, ಬ್ಯೂನಾಸ್ ಐರಿಸ್, ದಾರ್-ಎಸ್-ಸಲಾಮ್, ಮೊಂಬಾಸ, ಫ್ರೀಟೌನ್, ಸಿಂಗಪುರ್, ಬಾಂಬೆ, ಮಾರ್ಸಿಯಲ್ಲಿಸ್, ಲಂಡನ್..ನಿಂದ ಬರುತ್ತಿದ್ದವು. ಇವುಗಳು ಚಿಕ್ಕಪ್ಪನ ಹಡಗು ಹೋಗುತ್ತಿದ್ದ ಕೆಲವ ಸ್ಥಳಗಳು. ಅವರು ಒಂದೇ ಮಾರ್ಗದಲ್ಲಿ ಹೋಗುತ್ತಿದ್ದುದು ತುಂಬಾ ಅಪರೂಪ; ಅವರು ಆರಾಮವಾಗಿ ಸಾಗರಗಳಲ್ಲಿ ಯಾನ ಮಾಡುತ್ತಿದ್ದರು. ಯಾನ ಮಾಡುವಾಗ ಅವರು ಸುಂದರವಾದ ಬಂದರುಗಳಲ್ಲಿ ತಂಗುತಿದ್ದರು. ನಾನು ಆ ವೇಳೆಗಾಗಲೇ ಓದಿದ ಸ್ಟೀವನ್‌ಸನ್, ಕ್ಯಾಪ್ಟನ್ ಮಾರ್ಯಾಟ್, ಕೋರ್ನರಾಡ್ ಮತ್ತು ಡಬ್ಲ್ಯು. ಡಬ್ಲ್ಯು. ಜಾಕಬ್ಸ್ ಅವರ ಪುಸ್ತಕಗಳಲ್ಲಿ ಈ ಬಂದರುಗಳ ಸುಂದರ ವರ್ಣನೆಗಳನ್ನು ಓದಿದ್ದೆ. ನೀನು ಸ್ವಲ್ಪ ದೊಡ್ಡವನಾದ ಮೇಲೆ, ನನ್ನ ಜೊತೆಯಲ್ಲಿ ಸಮುದ್ರ ಯಾನ ಮಾಡಬಹುದು - ಎಂದು ನನ್ನ ಚಿಕ್ಕಪ್ಪ ನನಗೆ ಪತ್ರದಲ್ಲಿ ಬರೆಯುತ್ತಿದ್ದರು. ನಾನು ಸಾಕಷ್ಟು ದೊಡ್ಡವನಾಗಿದ್ದೇನೆ ಎಂದು ನನಗನ್ನಿಸುತ್ತಿತ್ತು. ನನಗೆ ಶಾಲೆ ಬೇಸರ ತಂದಿತ್ತು ಮತ್ತು ನನ್ನ ಪೋಷಕರನ್ನು ಕಂಡರೆ ನನಗೆ ಆಗುತ್ತಿರಲಿಲ್ಲ. ಅಷ್ಟೇ ಅಲ್ಲ, ಪ್ರಪಂಚದ ಮೇಲೆ ಪ್ರೀತಿ ಇತ್ತು. ನನಗೆ ಪ್ರಪಂಚವನ್ನೆಲ್ಲಾ ಸುತ್ತಬೇಕೆಂಬ ಆಸೆ. ಪ್ರಪಂಚದ ಮೂಲೆ ಮೂಲೆಯನ್ನೂ ನೋಡುವ ಆಸೆ, ನಾನು ಪುಸ್ತಕಗಳಲ್ಲಿ ಓದಿ ಕೇಳಿದ್ದ ಜಾಗಗಳು, ಹಾಂಗ್‌ಕಾಂಗ್‌ನ ಹಳೆಯ ವಸ್ತುಗಳು, ಚೀನಿಯರ ಸಣ್ಣ ದೋಣಿಗಳು, ಇಂಡೀಸ್‌ನ ತೆಂಗಿನ ಮರಗಳಿಂದ ಸುತ್ತುವರಿದ ಕೊಲ್ಲಿಗಳು, ಲಂಡನ್‌ನ ರಸ್ತೆಗಳು, ಆಫ್ರಿಕಾದ ಕಪ್ಪು ಚರ್ಮದ ಜನರು, ಅಮೆಜಾನ್‌ನ ಹೊಳೆಯುವ ಹಕ್ಕಿಗಳು ಮತ್ತು ಪರದೇಶದಿಂದ ತಂದು ಬೆಳೆಸಿದ ಗಿಡಗಳು...

ತಮ್ಮ ಹಿಂದಿನ ಪತ್ರದಲ್ಲಿ ಜಿಮ್ ಚಿಕ್ಕಪ್ಪ ಅವರ ಹಡಗು ತಿಂಗಳ ಕೊನೆಯಲ್ಲಿ ಜಾಮ್‌ನಗರ ತಲುಪುವುದೆಂದು ಬರೆದಿದ್ದುದನ್ನು ಓದಿ ನನಗೆ ಅತೀವ ಆನಂದವಾಯಿತು. ಆ ದಿನಕ್ಕಾಗಿ ನಾನು ಕಾತುರದಿಂದ ಎದುರುನೋಡಲಾರಂಭಿಸಿದೆ. ಕಡೆಗೂ ಇಂತಹ ಒಂದು ಒಳ್ಳೆಯ ಅವಕಾಶ ನಮಗೆ ಸಿಕ್ಕಿತು. ನಿಜ, ಚಿಕ್ಕಪ್ಪ ಜಿಮ್ ಅವರನ್ನು ನಾನು ಸೇರಿಕೊಳ್ಳುವ ಬಗ್ಗೆ ಏನೂ ತಿಳಿಸಿರಲಿಲ್ಲ. ಆದರೆ ನಾನು ಅದರ ಬಗ್ಗೆ ಗಾಢವಾಗಿ

ಯೋಚಿಸಿರುವುದು ಮಾತ್ರ ಅವರಿಗೆ ತಿಳಿಯಬಾರದಿತ್ತು. ಆದೇನೂ ಶಾಲೆಯಿಂದ ಹೊರಗೆ ನಡೆದುಕೊಂಡು ಹೋಗಿ ಪಡಗಿನ ಕಟ್ಟೆ ತಲಪುವಷ್ಟು ಸುಲಭದ ಮಾತಾಗಿರಲಿಲ್ಲ. ನಮ್ಮ ಶಾಲೆ ಇದ್ದ ಉತ್ತರ ಭಾರತದ ಗಿರಿಧಾಮ ಪಹಾಡ್‌ಗಂಜ್‌ನಿಂದ ಪಶ್ಚಿಮ ಕರಾವಳಿಯಲ್ಲಿದ್ದ ಜಾಮ್‌ನಗರ್‌ಗೆ ಕಡೇಪಕ್ಷ 800 ಮೈಲಿಯಷ್ಟು ದೂರ. ಎಂಟು ನೂರು ಮೈಲಿಗಳು!



# ಬೆಳದಿಂಗಳ ಸಭೆ

ದಲ್‌ಜೀತ್ ಬರಲು ಒಪ್ಪದೆ ಇದ್ದಿದ್ದರೆ ನಾನು ಇಂತಹ ಪ್ರಯತ್ನ ಮಾಡುತ್ತಿದ್ದೆನೋ ಇಲ್ಲವೋ ನನಗೆ ಅನುಮಾನ. ಹೇಳದೆ ಕೇಳದೆ ಓಡಿ ಹೋಗುವುದು ಹುಡುಗಾಟವಲ್ಲ. ಆರಂಭದಲ್ಲಿ ಅತಿ ಉತ್ಸಾಹ ತೋರಿಸಿ, ಕಡೆ ಗಳಿಗೆಯಲ್ಲಿ ಹಿಮ್ಮೆಟ್ಟುವಂತಹ ಗೆಳೆಯರಿದ್ದರೆ, ಪರಿಸ್ಥಿತಿ ಇನ್ನೂ ಕೇಡಾಗುತ್ತದೆ. ಇದರಿಂದ ಸಂಪೂರ್ಣ ಹತಾಶಭಾವನೆ ಉಂಟಾಗುತ್ತದೆ. ಆದರೆ ದಲ್‌ಜೀತ್ ಅಂತಹ ಜೊತೆಗಾರನಾಗಿರಲಿಲ್ಲ. ಅವನು ನುಡಿದಂತೆ ನಡೆಯುವವ. ಒಂದು ತಿಂಗಳ ಮುಂಚೆ ಹಡಗಿನಲ್ಲಿ ಹೋಗುವ ನನ್ನ ಆಸೆಯನ್ನು ಅವನಿಗೆ ತಿಳಿಸಿದಾಗ ಅವನು ಕ್ಷಣವೂ ತಡಮಾಡದೆ ನಾನೂ ಬರುತ್ತಿದ್ದೇನೆ! ಎಂದು ಹೇಳಿದ್ದ. ದಲ್‌ಜೀತ್ ಸಮಯಕ್ಕೆ ತಕ್ಕಂತೆ ವರ್ತಿಸುತ್ತಿದ್ದ. ಕೆಲವು ಸಾರಿ ಅವನು ತಪ್ಪು ಮಾಡುತ್ತಿದ್ದ. ಆದರೆ ಯಾವತ್ತೂ ಅರ್ಧಂಬರ್ಧ ಕೆಲಸ ಮಾಡಿ ಕೈಬಿಡುತ್ತಿರಲಿಲ್ಲ. ಯಾರಾದರೂ ಅವನನ್ನು ತಡೆಯದ ಹೊರತು ಅವನು ಹಿಡಿದ ಪಟ್ಟು ಬಿಡುತ್ತಿರಲಿಲ್ಲ. ಮಳೆಗಾಲದ ಆರಂಭದಲ್ಲಿ ನಡೆಯುತ್ತಿದ್ದ ದೂರದ ಓಟದ ಪಂದ್ಯದ ಸಮಯದಲ್ಲಿ ನಾವಿಬ್ಬರೂ ಸ್ನೇಹಿತರಾದೆವು. ನಾನು ಅಲ್ಪ ದೂರದ ಓಟದ ಪಂದ್ಯದಲ್ಲಿ ಸಾಕಷ್ಟು ಚೆನ್ನಾಗಿದ್ದೆ. ಆದರೆ ದಲ್‌ಜೀತ್ ಗುಂಡಗೆ ದಪ್ಪಕ್ಕೆ ಇದ್ದುದರಿಂದ ಅವನು ಬಾಕಿ ಹುಡುಗರ ಸಮಕ್ಕೆ ಓಡುವುದು ಸ್ವಲ್ಪ ಕಷ್ಟವೇ ಆಗಿತ್ತು.

ಚೆನ್ನಾಗಿ ಓಡುವ ಹುಡುಗರಿಗೆ ಮುಂದೆ ಓಡಲು ಅವಕಾಶ ಕಲ್ಪಿಸಿಕೊಟ್ಟು, ನಾನು ಹುಲ್ಲಿನ ದಿಣ್ಣೆ ಮೇಲೆ ಕುಳಿತು ಯಾವುದಾದರೂ ಕಾಮಿಕ್ ಅಥವಾ ಡೇವಿಡ್ ಕಾಪರ್ ಫೀಲ್ಡ್ ಅವರ ಪುಸ್ತಕದ ಒಂದು ಅಧ್ಯಾಯವನ್ನೋ ಓದುತ್ತಿದ್ದೆ.

ಒಂದು ದಿನ ಸಂಜೆ ನಾನು ಪುಸ್ತಕ ಓದುತ್ತಿದ್ದಾಗ ದಲ್‌ಜೀತ್ ಖುಷಿಯಿಂದ ಸಿಳ್ಳು ಹೊಡೆಯುತ್ತಾ ರಸ್ತೆಯಲ್ಲಿ ಅಡ್ಡಾಡಿಕೊಂಡು ಬರುತ್ತಿದ್ದುದನ್ನು ಕಂಡೆ.

"ನೀನು ಓಟದ ಪಂದ್ಯದಲ್ಲಿಲ್ಲವೇ?" ನಾನು ಕೇಳಿದೆ. "ಇದೀನಿ, ನೀನಿಲ್ಲವೆ?"

“ಇದೀನಿ” ಎಂದು ಹೇಳಿ ನಾನು ಪುನಃ ಓದಲು ಶುರು ಮಾಡಿದೆ. ದಲ್‌ಜೀತ್ ನನ್ನ ಪಕ್ಕದಲ್ಲಿ ಕುಳಿತುಕೊಂಡ. “ನಾವು ಕೊಂಚ ತಡವಾಗಿ ಹೋದರೆ ಅವರಿಗೇನೂ ನಷ್ಟವಿಲ್ಲ” ಅವನೆಂದ. “ನಾವ್ಯಾಕೆ ಆ ಅಂಗಡಿಗೆ ಹೋಗಿ ಬಿಸಿ ಬಿಸಿ ಪಕೋಡಗಳನ್ನು ತಿನ್ನಬಾರದು? ಹಣದ ಬಗ್ಗೆ ಯೋಚಿಸಬೇಡ. ನನ್ನ ಹತ್ತಿರ ಸಾಕಷ್ಟಿದೆ. ನಮ್ಮಮ್ಮ ನನ್ನನ್ನು ಮುದ್ದು ಮಾಡಿ ಹಾಳು ಮಾಡೋದನ್ನು ತಪ್ಪಿಸೋಕೆ ಯಾರಿಗೆ ಸಾಧ್ಯ?” ಎಂದ ದಲ್‌ಜೀತ್. ಹೀಗೆ ಪ್ರಾರಂಭವಾದ ನಮ್ಮಿಬ್ಬರ ಸ್ನೇಹ, ಮತ್ತಷ್ಟು ಗಾಢವಾಯಿತು. ಪಕೋಡದಿಂದ ಆರಂಭವಾಯಿತು ನಮ್ಮ ಸ್ನೇಹ. ನಂತರ, ಓದುವುದರ ಬಗ್ಗೆ ನಮ್ಮಿಬ್ಬರಿಗೂ ಇದ್ದ ದ್ವೇಷ, ಇಬ್ಬರ ಸ್ನೇಹವನ್ನೂ ಮತ್ತಷ್ಟು ಬೆಸೆಯಿತು.

ಈಗ, ಇಬ್ಬರೂ ಒಟ್ಟಿಗೆ ಕತ್ತಲಲ್ಲಿ ಎತ್ತರದ ಒಳಮಾಳಿಗೆಯ ವ್ಯಾಯಾಮಶಾಲೆಯಲ್ಲಿ ಕುಳಿತಿದ್ದಾಗ, ನಾವು ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಂಡಿದ್ದೇವೆ ಎಂದು ನಮಗನ್ನಿಸಿತು. ದಲ್‌ಜೀತ್ ಬಳಿ ಜಾಸ್ತಿ ಹಣ ಇದೆಯೆಂದು ನನಗೆ ಬೇಸರವಿರಲಿಲ್ಲ. ನಾನು ಬುದ್ಧಿವಂತ ಎಂದು ಅವನಿಗೂ ಬೇಸರವಿರಲಿಲ್ಲ. ನನಗೆ ಪುಸ್ತಕ ಓದುವ ಹವ್ಯಾಸ ತುಂಬಾ ಹೆಚ್ಚಾಗಿ ಇದ್ದುದನ್ನು ಅವನು ಮೆಚ್ಚಿಕೊಂಡಿದ್ದ. ನನಗೆ ವ್ಯವಹಾರಜ್ಞಾನ ಇರಲಿಲ್ಲ. ಲೋಕಾರೂಢಿಯ ಪ್ರಕಾರ ದಲ್‌ಜೀತ್ ಸಾಕಷ್ಟು ಅನುಭವಿಯಾಗಿದ್ದ. ಅವನು ನನ್ನನ್ನು ಮೆಚ್ಚಿಕೊಂಡಿದ್ದ. ಅವನು ತನ್ನ ಪೈಜಾಮದಿಂದ ಒಂದು ಮಡಚಿದ ಕಾಗದ ತೆಗೆದು ನೆಲದ ಮೇಲೆ ಅದನ್ನು ತೆರೆದಿಟ್ಟ. ಅದು ಇಂಡಿಯಾದ ರೈಲ್‌ವೇ ಮ್ಯಾಪ್ ಆಗಿತ್ತು. ಅವನು ಅದನ್ನು ಕಡೆಯ ಮತ್ತು ಅಂತಿಮ ಮ್ಯಾರಥಾನ್ ಪಂದ್ಯದ ಸಮಯದಲ್ಲಿ ಕೊಂಡುಕೊಂಡಿದ್ದ. ಅದೊಂದು ಮರೆಯಲಾಗದ ಸಂದರ್ಭ. ಆಗ ಬಜಾರಿನ ಕಡೆಗೆ ಕಾಲು ಕಿತ್ತು ಅನೇಕ ಸಾಮಾನುಗಳನ್ನು ಕೊಂಡುಕೊಂಡು ಶಾಲೆಗೆ ಕಾಲುದಾರಿಯಲ್ಲಿ, ಕ್ರಮವಾಗಿ ಮೊದಲನೆಯ ಮತ್ತು ಎರಡನೆಯವರಾಗಿ ಪಂದ್ಯದಲ್ಲಿ ಬಂದು ಸೇರುತ್ತಿದ್ದೆವು. ಆದರೆ ನಾವು ಅನರ್ಹರಾದೆವು, ತೀರ್ಪುಗಾರರು ಹಿಂತಿರುಗಿ ಬಂದು, ಯಾವ ನಿಶ್ಚಿತ ರಸ್ತೆಯಲ್ಲಿ ಬರಬೇಕಾಗಿತ್ತೋ ಅಲ್ಲಿ ನಮ್ಮನ್ನು ಕಾಣಲಿಲ್ಲವೆಂದು ಒತ್ತಾಯ ಮಾಡಿದರು. (ಆದರೆ ಎಲ್ಲರೂ ನಮ್ಮ ಜಯಭೇರಿಯನ್ನು ಅಭಿನಂದಿಸಿದ ಕೆಲವು ಕ್ಷಣಗಳ ಆನಂದ ನಮಗೆ ಸಿಗುತ್ತಿತ್ತು.)

ನಮ್ಮ ಮುಂದೆ ಬಿಡಿಸಿಟ್ಟುಕೊಂಡಿದ್ದ ಭೂಪಟದಲ್ಲಿ, ಹಿಮಾಲಯ ತಪ್ಪಲಲ್ಲಿದ್ದ ಪಹಾಡ್‌ಗಂಜನ್ನು ಕೆಂಪು ಪೆನ್ಸಿಲ್‌ನಿಂದ ಗುಂಡಗೆ ಸುತ್ತಿ ಗುರುತು ಮಾಡಿದೆ. ನಂತರ ಕಚ್ ಕೊಲ್ಲಿಯೆದುರುಗಡೆ, ಕಾಟಿವಾಡದ ಕೊಲ್ಲಿಯ ತುದಿಯಲ್ಲಿ ಇದ್ದ ಜಾಮ್‌ನಗರವನ್ನು ವರ್ತುಲ ಹಾಕಿ ಗುರತು ಮಾಡಿದೆ. ಏನೆಲ್ಲಾ ಇತ್ತು ಮಧ್ಯದಲ್ಲಿ? ಮೊದಲು ಗುಡ್ಡಗಳು, ಕಾಡುಗಳು, ಆಮೇಲೆ ಸಮತಟ್ಟು, ಡೋಬಿನ ಫಲವತ್ತಾದ ಹೊಲ–ಗದ್ದೆಗಳ ಭೂಮಿ (ಜಮುನ–ಗಂಗೆಯ ನೀರುಣ್ಣುವ ಸುತ್ತಣ ಪ್ರದೇಶ) ಡೆಲ್ಲಿಯ ತನಕ ಹರಡಿಕೊಂಡು ನಂತರ ರಾಜಾಸ್ಥಾನ್ ಮರುಭೂಮಿಯ ಕಂದು ಬೆಟ್ಟಗಳು, ಮರಳು ದಿಣ್ಣೆಗಳು; ಕೊನೆಗೆ ಗುಜರಾತ್ ಮತ್ತು ಮಹಾರಾಷ್ಟ್ರದ

ಫಲವತ್ತಾದ ಕರಾವಳಿ. ಅಲ್ಲಿ ನದಿ ಮತ್ತು ಸರೋವರಗಳಿದ್ದವು. ನಮಗೆ ಹೆಚ್ಚು ಸಮಯವಿಲ್ಲದಿದ್ದ ಕಾರಣ, ಯಾವ ಯಾವ ತರಹದ ಸಂಚಾರ ಸಾರಿಗೆ ಅನುಕೂಲಗಳಿದ್ದುವೋ ಅವನ್ನೆಲ್ಲಾ ಉಪಯೋಗಿದಿಕೊಳ್ಳಬೇಕಾಗಿತ್ತು. ಜಿಮ್ ಚಿಕ್ಕಪ್ಪನ ಹಡಗು, ಯಾವುದೇ ಬಂದರಿನಲ್ಲಿ ಅಗತ್ಯಕ್ಕಿಂತ ಹೆಚ್ಚು ಹೊತ್ತು ತಂಗುತ್ತಿರಲಿಲ್ಲ. ಮಳೆಗಾಲ ಶುರುವಾಗಿ ಹೆಚ್ಚು ತ್ರಾಸವಾಗುವುದಕ್ಕೆ ಮುಂಚೆಯೇ, ಜುಲೈ ತಿಂಗಳ ಕೊನೆಯಲ್ಲಿ ಅದು ಯಾನ ಮಾಡುವುದರಲ್ಲಿತ್ತು. "ನಾವು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಡೆಲ್ಲಿ ತಲುಪಬೇಕು" ನಾನೆಂದೆ. ಇಲ್ಲದಿದ್ದರೆ ನಾವು ಸುಲಭವಾಗಿ ಸಿಕ್ಕಿ ಹಾಕಿಕೊಳ್ಳಬಹುದು. ಡೆಲ್ಲಿ ಬಿಟ್ಟ ಮೇಲೆ ಅವರಿಗೆ ಇನ್ನೆಲ್ಲಿ ಹುಡುಕಬೇಕೆಂದು ಗೊತ್ತಾಗುವುದಿಲ್ಲ. ಭಾರತ ತುಂಬಾ ದೊಡ್ಡದು, ಎಲ್ಲಿಗೆ ಬೇಕಾದರೂ ಹೋಗಿ ನಾಪತ್ತೆಯಾವುದು ಅತಿ ಸುಲಭ."

"ಅವರುಗಳು ನಮ್ಮನ್ನು ಹುಡುಕಲು ತುಂಬಾ ಪಾಡುಪಡುತ್ತಾರೆ ಎನ್ನುತ್ತೀಯಾ?"

"ಹೌದು, ಖಂಡಿತ. ನನ್ನ ಪೋಷಕರು ಪ್ರಾಂಶುಪಾಲರ ಸ್ನೇಹಿತರೆಂಬುದನ್ನು ಮರೆಯಬೇಡ. ನಿನಗೇನಾದರೂ ಆದರೆ, ನಿಮ್ಮ ತಂದೆ ಶಾಲೆಯ ಮೇಲೆ ದಾವಾ ಹಾಕಿಬಿಡುವರು. ನಾವು ಕಾಣೆಯಾದೆವೆಂದು ಗೊತ್ತಾದ ತಕ್ಷಣ ಅವರು ಪಹಾಡಗಂಜ್‌ನಲ್ಲಿ ಹುಡುಕಲು ಶುರುಮಾಡುತ್ತಾರೆ. ಇಲ್ಲಿ ಅಥವಾ ಡೆಹ್ರಾದಲ್ಲಿ ನಾವು ಸಿಗದಿದ್ದರೆ ಅವರು ಪೋಲಿಸರಿಗೆ ತಿಳಿಸುತ್ತಾರೆ. ನಾವು ಬೇಕಾದ ಕೇಡಿಗಳ ಪಟ್ಟಿಯಲ್ಲಿ ಸೇರಿಬಿಡುತ್ತೇವೆ. ರೈಲ್‌ವೇ ಸ್ಟೇಷನ್ ಮತ್ತು ಬಸ್ ಸ್ಟಾಪ್‌ಗಳ ಮೇಲೆ ನಿಗಾ ಇಡುತ್ತಾರೆ". "ಅಂದರೆ ನಾವು ಡೆಲ್ಲಿಗೆ ನಡೆದುಕೊಂಡು ಹೋಗುತ್ತೇವೆಯೇ?" ದಲ್‌ಜೀತ್ ನಿರಾಶೆಯಿಂದ ನೋಡುತ್ತಾ ಹೇಳಿದ. "200 ಕಿಲೋಮೀಟರನ್ನು ನಡೆಯಲು ನನ್ನ ಕೈಲಾಗೋಲ್ಲ." "ನಾವು ಡೆಹ್ರಾ ತನಕ ಮಾತ್ರ ನಡೆಯೋಣ. ಬೆಟ್ಟದಿಂದ ಕೆಳಗಿಳಿಯುವತನಕ 20 ಕಿಲೋಮೀಟರ್ ಆಗುತ್ತೆ ತಾನೇ?" "ಆಗಬಹುದು ಎನ್ನಿಸುತ್ತೆ ನನಗೆ, ಅದೂ ಪೂರ್ತಿ ಇಳಿಯುವುದಾದರೆ". "ಡೆಹ್ರಾದಿಂದ ನಾವು ಗಾಡಿಯನ್ನೋ ಬಸ್ಸನ್ನೋ ಅಥವಾ ಟ್ರಕ್ಕನ್ನೋ ಹಿಡಿಯಬೆಕಾಗುತ್ತೆ. ನಾವು ರೈಲ್ವೇ ನಿಲ್ದಾಣಗಳಿಂದ ದೂರವಿರಬೇಕು".

"ಅದೇ ಸರಿ, ರಸ್ಟಿ. ಒಳ್ಳೇದು, ನಾವು ತುಂಬಾ ದೂರದ ಯೋಜನೆ ಹಾಕುವುದು ಬೇಡ. ಮೊದಲು ಡೆಲ್ಲಿಗೆ ಹೋಗೋಣ. ಸದ್ಯಕ್ಕೆ ಅಷ್ಟು ಸಾಕು. ಆಮೇಲೆ ಹೇಗೆ ಆಗುತ್ತೋ ಹಾಗೆ ಮಾಡೋಣ".

ನಾವು ಮೌನವಾಗಿದ್ದೆವು. ನಾವುಗಳೇನಾದರೂ ಸಿಕ್ಕಿಬಿದ್ದರೆ ಆಗುವ ಅನಾಹುತಗಳು, ಭಯಂಕರ ಸನ್ನಿವೇಶ, ಎದುರಿಸಬೇಕಾದ ತೊಂದರೆಗಳನ್ನು ಊಹಿಸಿಕೊಳ್ಳುತ್ತಿದ್ದೆವು. ಮೇಣದ ಬತ್ತಿ ಚಟ್ ಚಟ್ ಎಂದು ಆರಿಹೋಯಿತು. ಒಂದು ನಿಮಿಷ ಪೂರ್ತಿ ಕಗ್ಗತ್ತಲೆ ಆವರಿಸಿತ್ತು. ನಂತರ ಒಂದು ಸಣ್ಣ ಬೆಳಕು ನೆಲದ ಮೇಲೆ ಹಾಯ್ದು ನನ್ನ ಪಾದಗಳ ಮೇಲೆ ಬಿತ್ತು. "ನನ್ನ ಪೆನ್ಸಿಲ್ ಟಾರ್ಚ್ ಇಷ್ಟವೇ?" ದಲ್‌ಜೀತ್ ಕೇಳಿದ. "ಜಪಾನಿನಲ್ಲಿ ಮಾಡಿದ್ದು. ಮಾದರಿ ಜೇಮ್ಸ್ ಬಾಂಡನದು. ನಾನು ಹೋದ ವರುಷ ನೈರೋಬಿಯಲ್ಲಿ

ಕೊಂಡುಕೊಂಡೆ. ನಾವು ಬ್ಯಾಟರಿಯನ್ನು ದಂಡಮಾಡಬಾರದು. ಈ ಸೈಜು ಇಲ್ಲಿ ಸಿಕ್ಕೋಲ್ಲ.'' ಅವನು ಅದನ್ನು ಆರಿಸಿಬಿಟ್ಟ. ''ನಿಮ್ಮ ಮನೇಲಿ ನಿನ್ನನ್ನು ತುಂಬ ಮುದ್ದು ಮಾಡಿರೋದರಿಂದ ನೀನು ಕೆಟ್ಟುಹೋಗಿದ್ದಿ'' ನಾನೆಂದೆ.

''ಅದೇನೋ ನಿಜ'', ಒಳಗೊಳಗೇ ನಗುತ್ತಾ ದಲ್‌ಜೀತ್ ಹೇಳಿದ. ''ನಾನು ತುಂಬಾ ಕೆಟ್ಟುಹೋಗಿದ್ದೇನೆ'', ಅವನು ತನ್ನ ಕೈಯನ್ನು ನನಗೆ ಕೊಟ್ಟ ''ಸರಿ, ನಾಳೆರಾತ್ರಿ ತಾನೆ ಮತ್ತೆ?'' ಅವನು ಪಿಸುಗುಟ್ಟಿದ. ಪಿಸುಗುಟ್ಟಲು ಅವಶ್ಯಕತೆ ಏನೂ ಇರಲಿಲ್ಲವಾದರೂ ದಲ್‌ಜೀತ್ ಯಾವುದನ್ನೂ ನಾಟಕೀಯವಾಗಿ ಮಾಡಿ ಆನಂದಪಡುತ್ತಿದ್ದ.

''ಸರಿ, ನಾಳೆ ರಾತ್ರಿ'', ನಾನೆಂದೆ.

''ಎಲ್ಲಿ ಭೇಟಿ ಮಾಡೋಣ?''

''ಕಾಡಿನ ಪೈನ್ ಮರದ ಅಡಿಯಲ್ಲಿ. ದೊಡ್ಡ ಬಂಡೆಯ ಹತ್ತಿರ, ರಾತ್ರಿ ಹತ್ತು ಘಂಟೆಗೆ. ಅಲ್ಲಿಂದ ನಾವು ಹೊಳೆಯನ್ನು ಅನುಸರಿಸಿ, ಡೆಹ್ರಾಗೆ ಹೋಗುವ ರಸ್ತೆ ಸಿಗುವವರೆಗೂ ಹೋಗೋಣ''.

''ಸಮಯಕ್ಕೆ ಸರಿಯಾಗಿ ಬಂದು ಬಿಟ್ಟಿರು'' ಎಂದು ದಲ್‌ಜೀತ್ ಹೇಳಿದ. ''ನಾನು ಕತ್ತಲೆಯಲ್ಲಿ, ಕಾಡಿನ ಮಧ್ಯದಲ್ಲಿ ನಿನಗಾಗಿ ಕಾಯಲು ಇಷ್ಟಪಡೋಲ್ಲ. ಅಲ್ಲಿ ದೆವ್ವಗಳು ಕಾಣಿಸಿಕೊಳ್ಳುತ್ತವೆಂದು ಹೇಳುತ್ತಾರೆ''.

''ಸರಿ, ನೀನು ನಿನ್ನ ಟಾರ್ಚ್ ಇಟ್ಟುಕೊಂಡಿರು'' ನಾನೆಂದೆ. ಅವನು ಪುನಃ ನನ್ನ ಕೈ ಗಟ್ಟಿಯಾಗಿ ಹಿಡಿದ. ''ನಾವಿಬ್ಬರೂ ನಾಳೆ ಸ್ಕೂಲಿನಲ್ಲಿ ಮಾತನಾಡುವುದು ಬೇಡ. ಯಾರಿಗೂ ಸಂಶಯ ಬರಬಾರದು, ನಾವಿನ್ನು ಮಲಗಲು ಹೋಗೋಣ, ನನಗೆ ನಿದ್ರೆ ಬರುತ್ತಿದೆ''.

''ಚೆನ್ನಾಗಿ ನಿದ್ರೆಮಾಡು. ನಾಳೆಯಿಂದ ನಮಗೆ ನಿದ್ರೆ ಗಿದ್ರೆ ಏನೂ ಇರೋದಿಲ್ಲ''. ವ್ಯಾಯಾಮಶಾಲೆಯಿಂದ ನಾವು ಹೊರಗೆ ಬಂದಾಗ ಚಂದಿರ ಮೇಲೇರಿದ್ದ. ಚಂದ್ರನ ಬೆಳಕಿನಲ್ಲಿ ಮನೆ, ಕ್ರೀಡಾಂಗಣ ಮತ್ತು ನಿದ್ರಾಶಾಲೆಯ ಕಟ್ಟಡ ಸ್ಪಷ್ಟವಾಗಿತ್ತು. ಬೆಟ್ಟದ ಪಕ್ಕದಲ್ಲಿ ದೇವದಾರು ಮರಗಳ ಭಯಂಕರ ನೆರಳು ಬಿದ್ದಿತ್ತು. ಮೋಡದ ಒಂದೆರಡು ತುಣುಕುಗಳು ಚದುರುತ್ತಿದ್ದವು. ಅದು ಒಂದು ಸುಂದರ ರಾತ್ರಿಯಾಗಿತ್ತು. ''ನಾವು ಯಾರಿಗೂ ಕಾಣಿಸ್ತಿಲ್ಲ ಎಂದುಕೊಂಡಿದ್ದೀನಿ'' ದಲ್‌ಜೀತ್ ಹೇಳಿದ.

''ನೀವೇನಾದರೂ ಸಿಕ್ಕಿಹಾಕಿಕೊಂಡರೆ, ನಿದ್ರಾವಸ್ಥೆಯಲ್ಲೇ ನಡೆಯುತ್ತಿದ್ದ ನನ್ನನ್ನು ಅನುಸರಿಸಿಕೊಂಡು ಹೋಗುತ್ತಿದ್ದೆ ಎಂದು ಹೇಳು'' ಎಂದೆ.

''ಬಹಳ ಒಳ್ಳೇ ಉಪಾಯ. ನಿನಗೆ ಇಂಥ ಉಪಾಯಗಳು ಪುಸ್ತಕದಿಂದ ದೊರೆತಿರಬೇಕು'' ನಾವು ಹೆಣ ತಿನ್ನುವ ಪಿಶಾಚಿಗಳಂತೆ ಗೋಡೆಗಂಟಿಕೊಂಡು ಪರದಾಡಿಕೊಂಡು ಹೋಗಿ ನಮ್ಮ ನಿದ್ರಾಶಾಲೆಗೆ ಹತ್ತಿ ಹೋದೆವು.

ತನ್ನ ನಿದ್ರಾಶಾಲೆಯ ಬಾಗಿಲ ಹತ್ತಿರ ನಿಂತು ದಲಜೀತ್ ನನ್ನ ಕಡೆ ತಿರುಗಿ ಒಳಸಂಚಿನ ಸೂಚನೆಯ ಕೈಸನ್ನೆ ಮಾಡಿದ. ನಾನು ನನ್ನ ಹಾಸಿಗೆಗೆ ನುಸುಳಿಕೊಂಡು ನಿದ್ದೆ ಮಾಡಲು

ಪ್ರಯತ್ನಿಸಿದೆ. ನಾನು ನಮ್ಮ ಮುಂದಿನ ಸಾಹಸಮಯ ಅನುಭವಗಳು, ಹೇಗಿರಬಹುದು ಮತ್ತು ಪ್ರಯಾಣ ಯಾವ ತರಹ ಇರಬಹುದು ಎಂದು ಊಹಿಸಿಕೊಳ್ಳುತ್ತಾ ನಾವು ನಮ್ಮ ಚಿಕ್ಕಪ್ಪನ ಹಡಗನ್ನು ತಲುಪಿದಾಗ ಅವರಿಗಾಗುವ ಆಶ್ಚರ್ಯದ ಕಲ್ಪನೆಯನ್ನು ಮನದಲ್ಲಿ ಚಿತ್ರಿಸಿಕೊಳ್ಳುತ್ತಾ ಇದ್ದೆ.

ನನ್ನ ಯಾತ್ರೆಯ ಸಲುವಾಗಿ ಕೆಲಸಮಾಡುವುದಂತೂ ಇದ್ದೇ ಇತ್ತು. ದಲ್‌ಜೀತ್ ಮತ್ತು ನಾನು ಹಡಗಿನ ಮೇಲಂತಸ್ತಿನಲ್ಲಿ ಕೆಲಸದ ಹುಡುಗರಾಗಬಹುದು.

ಯಾಕೋಹಾಮ, ವಾಲ್‌ಪರೈಸೋ, ಸಾನ್‌ಡಿಯಾಗೋ, ಲಂಡನ್!



# ಢಾಬಾದಲ್ಲಿ ಚಹ

ಸ್ಕೂಲಿನಿಂದ ತಪ್ಪಿಸಿಕೊಂಡು ಹೋಗುವುದು!ಇದು ಎಲ್ಲರಿಗೂ ಸೂಚಿಸಬಹುದಾದಂತಹ ಕ್ರಮವಲ್ಲ. ಇದನ್ನು ತಂದೆ ತಾಯಿಗಳು ಮತ್ತು ಉಪಾಧ್ಯಾಯರು ವಿರೋಧಿಸುವರು. ಇಲ್ಲವೇ ಮನಸ್ಸಿನಲ್ಲೇ ಕೊರಗುವರೇನೋ? ತಮ್ಮ ಜೀವನದಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಪಲಾಯನ ಮಾಡುವ ಯೋಚನೆ ಪ್ರತಿಯೊಬ್ಬರಿಗೂ ಬಂದಿರಹುದು. ಕೆಟ್ಟ ಸ್ಕೂಲಿನಿಂದಲ್ಲದಿದ್ದರೂ ಮನೆಯಲ್ಲಿ ಓಡಿಹೋಗಲು ಪ್ರಯತ್ನಪಡುತ್ತಾರೆ. ಅಹಿತಕರ ಪಲಾಯನ ಮಾಡುವುದೂ ಸಹ ಪರಂಪರಾಗತವಾಗಿ ಬಂದಿರುವ ಕ್ರಮಗಳಲ್ಲಿ ಒಂದಾಗಿರುವಂತೆ ಕಾಣಬರುತ್ತದೆ. ಹಕ್ ಫಿನ್ ಮಾಡಿದ್ದೂ ಅದೇ ರೀತಿ. ಮಾಸ್ತರ್ ಕಾಪರ್ ಫೀಲ್ಡ್ ಮತ್ತು ಆಲಿವರ್ ಟ್ವಿಸ್ಟ್ ಸಹ ಹಾಗೆಯೇ ಮಾಡಿದ್ದರು. ಕಿಮ್ ಕೂಡ ಅದೇ ಕ್ರಮ ಅನುಸರಿಸಿದ್ದರು. ಎಷ್ಟೋ ಧೈರ್ಯಶಾಲಿ ಯುವಕರು ಸಮುದ್ರಕ್ಕೆ ಓಡಿ ಹೋಗಿದ್ದಾರೆ. ಎಷ್ಟೋ ಪ್ರಸಿದ್ಧ ವ್ಯಕ್ತಿಗಳು ತಮ್ಮ ಜೀವಮಾನದ ಯವುದೇ ಒಂದು ಹಂತದಲ್ಲಿ ಓಡಿಹೋಗಿದ್ದುಂಟು. ಹಾಗೇನಾದರೂ ಅವರು ಮಾಡಿರದಿದ್ದಲ್ಲಿ, ಅದು ಖಂಡಿತ ಅವರು ಮಾಡದೇ ಉಳಿಸಿದ ಕೆಲಸ ಎನ್ನಬಹುದು.

ಅದೇನಾದರೂ ಇರಲಿ, ನಾನು ಮತ್ತು ದಲ್‌ಜೀತ್ ಸ್ಕೂಲಿನಿಂದ ಓಡಿಹೋದೆವು. ನಾವು ವಿನಾಕಾರಣ ಸಮಯ ಹಾಳುಮಾಡುವಂತಿರಲಿಲ್ಲ. ಒಂದು ಹಂತದ ವರೆಗೆ ನಾವು ಈ ಪ್ರಯತ್ನದಲ್ಲಿ ಯಶಸ್ಸು ಸಹ ಪಡೆದಿದ್ದೆವು. ಆದರೆ ಇದೆಲ್ಲಾ ಭಾರತದಲ್ಲೇ ನಡೆದಿತ್ತು. ಭಾರತ, ಪ್ರಪಂಚದ ಭೂ ಭಾಗದ ಕೇವಲ ಶೇಕಡಾ ಎರಡು ಭಾಗದಷ್ಟಿದ್ದರೂ ಪ್ರಪಂಚದ ಜನಸಂಖ್ಯೆಯ ಶೇಕಡಾ 15 ರಷ್ಟು ಜನ ಇಲ್ಲಿದ್ದಾರೆ. ಆದ್ದರಿಂದ ತಲೆಮರೆಸಿಕೊಳ್ಳುವುದು, ತಪ್ಪಿಸಿಕೊಳ್ಳುವುದು ಅಥವಾ ಕಣ್ಮರೆಯಾಗುವುದು ಬಹಳ ಸುಲಭವಾಗಿತ್ತು ಮತ್ತು ಪುನಃ ಕಾಣಿಸಿಕೊಳ್ಳುವುದಾಗಲಿ, ಕೇಳುವುದಾಗಲಿ ಇಲ್ಲವೇ ಇಲ್ಲ. ನಮ್ಮ ಉದ್ದಿಶ್ಯ ಮಾಯವಾಗಿಬಿಡುವುದೆಂದಿರಲಿಲ್ಲ. ನಾವು ಒಂದು ನಿರ್ದಿಷ್ಟ ಜಾಗಕ್ಕೆ ತಲೆಹಾಯ್ದಿದ್ದೆವು – ಜಾಮ್‌ನಗರ – ನಾನು

ಗೊತ್ತು ಗುರಿ ಇಲ್ಲದ ಜಾಗದಲ್ಲಿ ಮೊದಲ ಹೆಜ್ಜೆ ಇಟ್ಟಾಗ – ಅದೂ ಶಾಲೆಯ ಕೆಳಗೆ ಬಿದ್ದಿದ್ದ ಜಾರುವ ಪೈನ್ ಸೂಜಿ ಎಲೆಗಳ ಮೇಲೆ, ನಾನು ಯಾವುದರಿಂದಲೂ ಪಲಾಯನ ಮಾಡುತ್ತಿಲ್ಲ, ಆದರೆ ಯಾವುದೋ ಒಂದರ ಕಡೆ ಓಡುತ್ತಿದ್ದೇನೆ ಎಂದು ನನಗೆ ಸ್ಪಷ್ಟವಾಗಿ ಗೊತ್ತಿತ್ತು. ನೀವು ಬೇಕಾದರೆ ಅದನ್ನು ಕನಸೆಂದು ಕರೆಯಿರಿ. ನಾನು ಒಂದು ಕನಸಿನತ್ತ ಕಡೆಗೆ ಓಡುತ್ತಿದ್ದೆ. ಬರೀ ಕಾಲಿನಲ್ಲಿ ಮತ್ತು ಪೈಜಾಮದಲ್ಲಿ ನಾನು ಬೆಟ್ಟದ ಪ್ರಪಾತದಲ್ಲಿ ಜಾರಿದೆ, ಕಾಡಿನ ಮಧ್ಯೆ ಇದ್ದ ಸಮತಟ್ಟಿನ ಬಂಡೆಯ ಬಳಿ ನಾನು ಮೊದಲು ತಲುಪಿದೆ. ಪೈನ್ ಮರಗಳ ಉಸಿರೆನ್ನುವಂತೆ ಕುಳಿರ್ಗಾಳಿ ಬೀಸುತ್ತಿತ್ತು. ರಾತ್ರಿ ಮನೋಹರವಾಗಿಯೂ ತಂಪಾಗಿಯೂ ಇತ್ತು. ಇಕ್ಕಟ್ಟಾದ ಕಮರಿಯಲ್ಲಿ ಹೊಳೆಯ ಜುಳು ಜುಳು ಶಬ್ದ ಕೇಳಿ ಬರುತ್ತಿತ್ತು. ಅದು ಒಬ್ಬ ಮನುಷ್ಯ ತನ್ನಷ್ಟಕ್ಕೆ ತಾನೇ ರಾಗವಿಲ್ಲದೆ ಗುನುಗುಟ್ಟುವ ಶಬ್ದದಂತಿತ್ತು. ಮಳೆಗಾಲದ ಮೋಡದ ಹಿಂದಿನಿಂದ ಹುಣ್ಣಿಮೆ ಚಂದ್ರ ಹೊರಕ್ಕೆ ಬಂದ. ಮರಗಳು, ಪೊದೆಗಳು, ಕಲ್ಲು ಬಂಡೆಗಳು ಕತ್ತಲಿನಿಂದ ಗೋಚರಕ್ಕೆ ಬಂದವು. ದಲ್‌ಜೀತ್ ಕೆಲವು ನಿಮಿಷಗಳ ನಂತರ ಬಂದ. ಅವನಿನ್ನೂ ಪೈಜಾಮದಲ್ಲೇ ಇದ್ದರೂ, ತಲೆಗೆ ಪಗಡಿ ಸುತ್ತಿದ್ದ. ಎಲ್ಲ ಸಿಖ್ಖರಿಗೆ ಇರುವಂತೆ ಅವನಿಗೂ ತನ್ನಪಗಡಿ ಬಗ್ಗೆ ಅತೀವ ಹೆಮ್ಮೆ ಇತ್ತು. ಅವನು ಅದನ್ನು ರಾತ್ರಿವೇಳೆ ಅಥವಾ ಆಟ ಆಡುವಾಗ ಮಾತ್ರ ತೆಗೆಯುತ್ತಿದ್ದ. ಬರೀ ತಲೆಯಲ್ಲಿ ಪಲಾಯನ ಮಾಡುವುದನ್ನಂತೂ ಅವನು ಕನಸಿನಲ್ಲಿ ಸಹ ಕಂಡಿರಲಿಕ್ಕಿಲ್ಲ. ಮಲಗಿಕೊಳ್ಳುವಾಗ ಅವನು ಅದರ ಸುತ್ತನ್ನು ಬಿಚ್ಚದೆ ಹಾಗೇ ತೆಗೆದಿಡುತ್ತಿದ್ದ. ಹಾಸಿಗೆ ಬಿಟ್ಟು ಎದ್ದನಂತರ ಅದನ್ನು ಒಂದು ಹ್ಯಾಟ್‌ನಂತೆ, ಒಂದೇ ಒಂದು ಮಡಿಕೆಯೂ ಕೆಡದಂತೆ ಒಪ್ಪವಾಗಿ ಇಟ್ಟುಕೊಳ್ಳುತ್ತಿದ್ದ.

ನಾವು ನಮ್ಮ ವ್ಯಾಯಾಮದ ಬಟ್ಟೆಗಳನ್ನು ಒಂದು ಗಂಟಿನಲ್ಲಿ ಕಟ್ಟಿಕೊಂಡು ತಂದಿದ್ದೆವು. ಹೊರಡುವುದಕ್ಕೆ ಮುಂಚೆ ಬಟ್ಟೆ ಬದಲಿಸಿಕೊಂಡೆವು. ಯಾಕೆಂದರೆ ನಮ್ಮ ಶಾಲೆಯ ಉಡುಪುಗಳು ಎದ್ದುಕಾಣುತ್ತಿದ್ದವು. ಮನೆಯ ಉಡುಪುಗಳನ್ನು ಶಿಕ್ಷಣಾವಧಿಯಲ್ಲಿ ಪ್ರತ್ಯೇಕ ಕೋಣೆಯಲ್ಲಿ ಕಟ್ಟಿಟ್ಟುಬಿಟ್ಟಿದ್ದೆವು. ನಮ್ಮ ಬೆನ್ನು ಚೀಲಗಳು ತಿಂಡಿ ತಿನಿಸುಗಳಿಂದ ತುಂಬಿದ್ದವು; ಪೈಜಾಮ ಮತ್ತು ಒಂದೆರಡು ಪುಸ್ತಕಗಳೂ ಅದರೊಳಗೆ ಸೇರಿದ್ದವು. ನಮ್ಮ ಆಸ್ತಿಯ ಹೆಚ್ಚು ಭಾಗ – ಬಟ್ಟೆಗಳು; ಹಾಸಿಗೆ ಮತ್ತು ಪೆಟ್ಟಿಗೆಗಳನ್ನು ನಾವು ಖುಷಿಯಾಗಿ ಹಿಂದೆ ಬಿಟ್ಟಿದ್ದೆವು.

ಒಂದು ಕಿರಿದಾದ ಹಾದಿ ಬೆಟ್ಟದ ಇಳಿಜಾರಿನಲ್ಲಿ ಹೋಗುತ್ತಿತ್ತು. ಸಮತಲವಾದ ಪ್ರದೇಶಕ್ಕೆ ಬರುವವರೆಗೂ ನಾವು ಆ ಹಾದಿ ಅನುಸರಿಸಿದ್ದೆವು. ಅದಕ್ಕೆ ಸಮಾನಾಂತರದಲ್ಲಿ ಒಂದು ಹೊಳೆ ಬೆಟ್ಟದ ಸುತ್ತ ಹರಿಯುತ್ತಿತ್ತು. ನಾವು ಒಂದು ಮೈಲಿಯಷ್ಟು ದೂರ ವೇಗವಾಗಿಯೂ ನಿಶ್ಶಬ್ದವಾಗಿಯು ಹೊಳೆಯ ಪಥವನ್ನೇ ಅನುಸರಿಸಿ, ಒಂದು ಹೇಸರಗತ್ತೆ ಹೋಗುವ ದಾರಿಗಿಂತ ಅಗಲದ ರಸ್ತೆವರೆಗೆ ಬಂದೆವು. ಬೆಟ್ಟದ ಕೊನೆ. ಕಡಿದಾದ ಇಳಿಜಾರು ಕಣಿವೆಯವರೆಗಿನ ರಸ್ತೆ ಅದು.



ಹೋಗುವುದು ಸುಲಭವಾಗಿತ್ತು. ನಮಗೆ ದಾರಿ ಚೆನ್ನಾಗಿ ಗೊತ್ತಿತ್ತು. ನಾವು ಬೆಟ್ಟದ ತಪ್ಪಲು ತಲುಪುವ ಹೊತ್ತಿಗೆ ಮಳೆ ಪ್ರಾರಂಭವಾಯಿತು. ಸಣ್ಣ ತುಂತುರು ಮಳೆ ಬೀಳುತ್ತಿತ್ತು. ನಾವು ಹಳ್ಳಿಯ ಹೊರಗಡೆ ಇದ್ದ ಒಂದು ಢಾಬಾದಲ್ಲಿ ಆಶ್ರಯ ಪಡೆದೆವು. ಢಾಬಾವಾಲ ಇನ್ನೂ ಮಲಗಿದ್ದ. ಅವನ ನಾಯಿ ನಮ್ಮನ್ನು ಅಟ್ಟಿಸಿಕೊಂಡು ಬರದೆ ಸ್ನೇಹದಿಂದ ಮೂಸಿ ನೋಡಿತು. ನಾವು ಒಂದು ಹಳೆಯ ಬೆಂಚಿನ ಮೇಲೆ ಕುಳಿತುಕೊಂಡು ದೂರದ ಪರ್ವತದಿಂದ ಸೂರ್ಯ ಉದಯಿಸುವುದನ್ನೇ ಕಾಯುತ್ತಾ ಕುಳಿತೆವು.

ಅಂದಿನ ಸೂರ್ಯೋದಯ ನನ್ನ ಪಾಲಿಗೆ ಎಂದಿಗಿಂತಲೂ ಹೆಚ್ಚು ಸುಂದರವಾಗಿ ಕಂಡಿತು. ಅದೊಂದು ಮರೆಯಲಾಗದ ಅನುಭವ. ವಿಶೇಷ ಮಹತ್ವ ಪಡೆದಿದ್ದ ಆ ಮುಂಜಾನೆ, ನಾನು ಏನನ್ನು ನೋಡಿದರೂ, ಅದು ನನಗೆ ಒಂದು ಹೊಸ ಬಗೆಯಲ್ಲಿ ಕಾಣಬರುತ್ತಿತ್ತು. ಅದರ ಒಂದೊಂದು ವಿವರವೂ ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿದಂತಿದೆ. ಆಕಾಶದಲ್ಲಿ ಬೆಳಕು ಹರಡಿದಂತೆ ಎತ್ತರದ ಪೈನ್ ಮತ್ತು

ದೇವದಾರುಗಳು ಸ್ಪಷ್ಟವಾಗಿ ಗೋಚರಿಸತೊಡಗಿದವು. ಹಕ್ಕಿಗಳು ಚಿಲಿಪಿಲಿಗುಟ್ಟಿದವು. ಒಂದು ಕಪ್ಪು ಹಕ್ಕಿ ಮೊದಲು ಮೃದುವಾದ ಸ್ನೇಹಪೂರ್ಣ ಸ್ವರದಿಂದ ಹಾಡಲು ಶುರುಮಾಡಿತು. ನಂತರ ಹಕ್ಕಿಗಳ ಕಲರವ ದಟ್ಟ ಪೊದೆಗಳಿಂದ ಕೇಳಿ ಬಂತು. ಸ್ಪ್ರೂಸ್ ಮರದ ತುಟ್ಟ ತುದಿಯಲ್ಲಿ ತಲೆಯ ಮೇಲೆ ಜುಟ್ಟಿರುವ ಹಕ್ಕಿ ಒಂದೇ ಸಮನೆ ಕೀರಲು ಧ್ವನಿಯಿಂದ ಕಿರಿಚುತ್ತಾ ಇತ್ತು. ಆಕಾಶದಲ್ಲಿ ಬೆಳಕು ಮೂಡಿದಾಗ ಹೊಳೆಯುವ ಹಸಿರು ಗಿಣಿಗಳು ಗುಂಪು-ಗುಂಪಾಗಿ ಮರದಿಂದ ಹೋದವು. ಮಳೆ ಸಣ್ಣಗೆ ಬರುತ್ತಿತ್ತು. ತುಂತುರುಮಳೆ. ಪೂರ್ವದಲ್ಲಿ ಪ್ರಜ್ವಲ ಅರುಣಗೆಂಪು ಕಾಣಬಂತು. ನಂತರ ಇದ್ದಕ್ಕಿದ್ದಂತೆ ಮೋಡಗಳ ಮಧ್ಯೆ ಸೂರ್ಯ ಮೇಲೇರಿದ. ಮಳೆಗಾಲದಲ್ಲಿ ಹುಲುಸಾಗಿ ಬೆಳೆದ ಹಸಿರು ಹುಲ್ಲು ಎದ್ದು ಕಾಣತೊಡಗಿತು. ನಾನು ಮತ್ತು ದಲ್‌ಜೀತ್ ಇಬ್ಬರೂ ಬೆರಗಾದೆವು. ನಾವು ಯಾವತ್ತೂ ಇಷ್ಟು ಮುಂಚೆ ಎದ್ದಿರಲಿಲ್ಲ. ಮರಗಳಲ್ಲಿ, ಪೊದೆಗಳಲ್ಲಿ, ಹುಲ್ಲಿನ ಮೇಲೆ ಸಾಮಾನ್ಯವಾಗಿ ಕಣ್ಣಿಗೆ ಕಾಣಿಸದ ನೂರಾರು ಜೇಡರ ಬಲೆಗಳು, ಸ್ಪಷ್ಟವಾಗಿ ಕಾಣತೊಡಗಿದವು. ಚಿನ್ನ ಬೆಳ್ಳಿ ತಗಡಿನಂತೆ ಹೊಳೆಯುವ ಮಳೆಹನಿಗಳೊಡನೆ ಸ್ಪಷ್ಟವಾಗಿ ಕಾಣುತ್ತಿದ್ದವು. ಗಟ್ಟಿಯಾದ ರೇಷ್ಮೆದಾರ ಮಳೆಯನ್ನು ಹಿಡಿದಿಟ್ಟಿತ್ತು. ಸೂರ್ಯ ಪ್ರತಿ ನೀರಿನ ಹನಿಯನ್ನು ಒಂದು ಸಣ್ಣ ರತ್ನದಂತೆ ಮಾಡಿದ್ದ.

ಮಳೆಯ ನೀರಲ್ಲಿ ನೆಂದು ಭಾರವಾದ ದೊಡ್ಡ ಬೆಟ್ಟದಾವರೆಯ ಕೆಂಪು ಹೂಗಳು ಬೆಟ್ಟದ ಕಡೆ ವಾಲಿದ್ದವು. ಹಸಿರು ಮಿಡತೆಯೊಂದು ಹೂ ದಳದ ಮೇಲೆ ಒರಗಿ ಸೂರ್ಯನ ಹೊಂಬೆಳಕಿನಲ್ಲಿ ಕಾಲುಗಳನ್ನು ಚಾಚಿಕೊಂಡಿತ್ತು. ಢಾಬಾವಾಲ ಎದ್ದಾಗಿತ್ತು. ಅವನ ನಾಯಿ ತನ್ನ ಮಾಲೀಕ ಹತ್ತಿರವೇ ಇದ್ದುದರಿಂದ ಧೈರ್ಯಗೊಂಡು ನಮ್ಮತ್ತ ಬೊಗಳಲು ಶುರುಮಾಡಿತು. ಅವನು ಕಲ್ಲಿದ್ದಲು ಒಲೆಯನ್ನು ಹೊತ್ತಿಸಿ, ಒಂದು ಕೆಟ್ಲ್ ನೀರನ್ನು ಕುದಿಸಲು ಇಟ್ಟ.

"ಬೇಡ, ನಮಗೆ ಚಹ ಸಾಕು" ನಾನೆಂದೆ. ಅವನು ಎರಡು ಹಿತ್ತಾಳೆ ಲೋಟಗಳನ್ನು ಮೇಜಿನ ಮೆಲಿಟ್ಟ. "ಇನ್ನೂ ಹಾಲು ಬಂದಿಲ್ಲ, ನೀವು ಬಹಳ ಬೇಗ ಬಂದಿದ್ದೀರಾ" ಅವನೆಂದ.

"ನಾವು ಹಾಲಿಲ್ಲದ ಚಹ ಕುಡಿಯುತ್ತೇವೆ. ನಮಗೆ ಜಾಸ್ತಿ ಸಕ್ಕರೆ ಹಾಕಿಕೊಡು" ದಲಜೀತ್ ಹೇಳಿದ.

"ಸಕ್ಕರೆ ಈಗ ತುಂಬ ದುಬಾರಿಯಾಗಿದೆ. ಶಾಲೆಯ ಹುಡುಗರಾದ್ದರಿಂದ ನಿಮಗೆ ಜಾಸ್ತಿ ಬೇಕು, ನಿಮಗೆಷ್ಟು ಬೇಕೋ ನೀವೇ ಹಾಕಿಕೊಳ್ಳಿ."

"ಓಹೋ, ನಾವು ಶಾಲೆಯ ಹುಡುಗರಲ್ಲ". ನಾನು ಕೂಡಲೇ ಹೇಳಿದೆ.

"ಅಲ್ಲವೇ ಅಲ್ಲ". ದಲ್‌ಜೀತ್ ಹೇಳಿದ.

"ನಾವು ಬರೀ ಪ್ರವಾಸಿಗರು" ನಾನು ಧ್ವನಿಗೂಡಿಸಿದೆ.

"ನಾವು ಡೆಹ್ರಾದಲ್ಲಿ ಮೊದಲು ಹೊರಡುವ ರೈಲು ಹಿಡಿಯಬೇಕು" ಎಂದ ದಲ್‌ಜೀತ್.

"ಹತ್ತು ಘಂಟೆಗೆ ಮುಂಚೆ ಯಾವ ಗಾಡಿಯೂ ಇಲ್ಲ" ಢಾಭಾವಾಲ ಹೇಳಿದ.

"ನಾವು ಹತ್ತು ಘಂಟೆಯ ಗಾಡಿಯನ್ನೇ ಹಿಡಿಯಬೇಕಾಗಿದೆ." ದಲ್‌ಜೀತ್ ಚುರುಕಾಗಿ ಹೇಳಿದ. "ನಾವು ಸಮಯಕ್ಕೆ ಸರಿಯಾಗಿ ತಲುಪಬಹುದೇ?"

"ಓಹೋ ಧಾರಾಳವಾಗಿ, ಬೇಕಾದಷ್ಟು ಸಮಯವಿದೆ..."

ಢಾಬಾವಾಲ ಬಿಸಿ ಚಹವನ್ನು ಲೋಟಗಳಿಗೆ ಸುರಿದು, ಸಕ್ಕರೆ ಬಟ್ಟಲನ್ನು ನಮ್ಮ ಮುಂದೆ ಇಟ್ಟ. "ನೀವು ಶಾಲಾ ವಿದ್ಯಾರ್ಥಿಗಳೆಂದುಕೊಂಡಿದ್ದೆ"ಅವನು ನಗುತ್ತಾ ಹೇಳಿದ. "ನೀವು ಮನೆ ಬಿಟ್ಟು ಎಲ್ಲೋ ಓಡಿ ಹೋಗುತ್ತಿದ್ದೀರಿ ಎಂದುಕೊಂಡೆ".

ದಲ್‌ಜೀತ್ ಸ್ವಲ್ಪ ಗಾಬರಿಯಿಂದಲೇ ನಕ್ಕ ಎಂದು ನನಗೆ ಅನ್ನಿಸಿತು. "ನೀನು ಹಾಗೆಂದು ಯೋಚಿಸಲು ಕಾರಣವೇನು?" ಅವನು ಕೇಳಿದ.

"ಓಹೋ, ನಾನಿಲ್ಲಿ ಎಷ್ಟೋ ವರುಷಗಳಿಂದ ಇದ್ದೇನೆ" ಗಡಿಕಾವಲಿನ ಪ್ರದೇಶದ ವ್ಯಾಪಾರದಂತಿದ್ದ ತನ್ನ ಸಣ್ಣ ಮರದ ಪೆಟ್ಟಿಗೆಯ ಅಂಗಡಿಯನ್ನು ಓರಣವಾಗಿಡುತ್ತಾ ಅವನೆಂದ. "ಶಾಲೆಯ ಹುಡುಗರು ತಪ್ಪಿಸಿಕೊಂಡು ಓಡಿ ಹೋಗುವಾಗ ಈ ದಾರಿಯ ಮೂಲಕವೇ ಹೋಗುತ್ತಾರೆ!"

"ಬಹಳ ಜನ ಓಡಿ ಹೋಗ್ತಾರೇನೋ?" ನಾನು ಕೇಳಿದೆ.

"ಬಹಳ ಏನಿಲ್ಲ. ಪ್ರತಿ ವರುಷ ಇಬ್ಬರು ಅಥವಾ ಮೂವರು ಅಷ್ಟೇ. ಅವರು ಡೆಹ್ರಾದ ರೈಲ್ವೇ ಸ್ಟೇಷನ್ ತನಕ ತಪ್ಪಿಸಿಕೊಂಡು ಬರುತ್ತಾರೆ ಮತ್ತು ಅಲ್ಲಿ ಸಿಕ್ಕಿ ಬೀಳುತ್ತಾರೆ!"

"ಸಿಕ್ಕಿ ಬೀಳುವುದು ಅವರ ದಡ್ಡತನ" ದಲ್‌ಜೀತ್ ಅಂದ. "ಅವರುಗಳು ಯಾವಾಗಲೂ ಸಿಕೆಹಾಕಿಕೊಳ್ಳುತ್ತಾರೆಯೇ?" ನಾನು ಕೇಳಿದೆ.

"ಯಾವಾಗಲ.! ಅವರು ಕೆಳಗಿಳಿದು ಹೋಗುವಾಗ ಒಂದು ಲೋಟ ಚಹ ಕೊಡುತ್ತೇನೆ ಮ...ು ಅವರು ಉಪಾಧ್ಯಾಯರುಗಳ ಜೊತೆ ಮೇಲೆ ಹಿಂದಿರುಗಿ ಹೋಗುವಾಗ ಇ... ನ್ನೊಂದು ಲೋಟ ಚಹ ಕೊಡುತ್ತೇನೆ."

"ಒಳ್ಳೇದು, ನೀನು ನಮ್ಮನ್ನು ಪುನಃ ನೋಡೋಲ್ಲ." ದಲ್‌ಜೀತ್ ಅಂದ. ಎಚ್ಚರಿಕೆ ಕೊಡುವಂತೆ ಅವನ ಕಡೆ ನಾನು ನೋಡಿದ್ದನ್ನೂ ಸಹ ಅವನು ಲಕ್ಷಿಸಲಿಲ್ಲ.

"ಆಹಾ, ನೀವುಗಳೇನೂ ಶಾಲೆಯ ಹುಡುಗರಲ್ಲವಲ್ಲಾ!" ಅಂಗಡಿಯವ ನಮ್ಮ ಕಡೆ ಮುಗುಳ್ನಗುತ್ತಾ ಹೇಳಿದ, "ಅಲ್ಲದೆ ನೀವೇನೂ ತಪ್ಪಿಸಿಕೊಂಡು ಹೋಗುತ್ತಿಲ್ಲವಲ್ಲ!" ನಾವು ನಮ್ಮ ಚಹದ ಹಣವನ್ನು ಕೊಟ್ಟು ತಕ್ಷಣವೇ ರಸ್ತೆಯ ಇಳಿಜಾರಿನತ್ತ ಬೇಗಬೇಗ ಹೊರಟೆವು. ಗಿಣಿಗಳು ಪುನಃ ಹಾರಿಹೋಗಿ ಜೋರಾಗಿ ಕಿರಿಚುತ್ತಾ ಲೀಚಿ ಮರದ ಮೇಲೆ ಕುಳಿತವು. ಸೂರ್ಯನ ತಾಪ ಈಗ ಜಾಸ್ತಿಯಾಗಿತ್ತು ಮತ್ತು ಕೆಳಗೆ ಇಳಿಯುತ್ತಿದ್ದಂತೆ ಶಾಖ ಹಾಗೂ ತೇವಾಂಶ ಏರತೊಡಗಿತು. ಬಿಸಿ ಏರುತ್ತಿದ್ದಂತೆ ಹೊಲಗದ್ದೆಗಳಿಂದ ಬರುತ್ತಿದ್ದ ಕಂಪು ನಮ್ಮ ಮೂಗಿಗೆ ಬಡಿಯುತ್ತಿತ್ತು.

ಬೆಟ್ಟಗಳು ಮುಗಿದು ಸಮತಲ ಪ್ರದೇಶಕ್ಕೆ ಬಂದೆವು. ಹೊಲ ಗದ್ದೆಗಳು ಕಾಣಿಸತೊಡಗಿದವು. ಭತ್ತದ ನಾಟಿಯಾಗಿತ್ತು ಮತ್ತು ಕಬ್ಬು ಸೊಂಟದೆತ್ತರ ಬೆಳೆದಿತ್ತು.

ರಸ್ತೆ ಬಹಳ ಕೆಸರಾಗಿತ್ತು. ನಾವು ನಮ್ಮ ಜೋಡುಗಳನ್ನು ತೆಗೆದು ನ್ಯೂಸ್ ಪೇಪರಿನಲ್ಲಿ ಸುತ್ತಿಟ್ಟುಕೊಂಡು, ಬರೀ ಕಾಲಲ್ಲಿ ಮೆತ್ತನೆ ಮಣ್ಣಿನಲ್ಲಿ ನಡೆದೆವು.

"ಡೆಹ್ರಾಗೆ ಮೂರು ಮೈಲಿ ಇದೆ" ನಾವುಗಳು ಹಳ್ಳಿ ಸುತ್ತಿಕೊಂಡು ಹೋಗೋಣ, ಇಷ್ಟು ಹೊತ್ತಿಗೆ ಶಾಲೆಯಲ್ಲಿ ಎಲ್ಲರೂ ಎದ್ದಿರುತ್ತಾರೆ. ನಾವು ಅಲ್ಲಿ ಇಲ್ಲದೇ ಇರುವುದು ಅವರಿಗೆ ಇಷ್ಟು ಹೊತ್ತಿಗೆ ಗೊತ್ತಾಗಿರಬಹುದು."

"ನಾವು ಸ್ಟೇಷನ್‌ಗೆ ಹೊಗಬಾರದು."ದಲ್‌ಜೀತ್ ಅಂದ. "ನಾವು ಮುಂದಿನ ನಿಲ್ದಾಣ ರಾಯ್‌ವಾಲಕ್ಕೆ ನಡೆದುಕೊಂಡು ಹೋಗೋಣ" ನಾನೆಂದೆ. "ನಂತರ ಯಾವ ಗಾಡಿ ಮೊದಲು ಬರುತ್ತೋ ಅದರೊಳಕ್ಕೆ ಜಿಗಿದುಬಿಡೋಣ".

"ನಾವು ಎಷ್ಟು ದೂರ ನಡೆಯಬೇಕು?"

"ಹತ್ತು ಮೈಲಿ".

"ಹತ್ತು ಮೈಲಿ!" ದಲ್‌ಜೀತ್ ದಿಗಿಲುಗೊಂಡವನಂತೆ ಕಂಡ.

ಹಾಗಾದರೆ ಇಡೀ ದಿನ ನಡೆಯಬೇಕಾಗುತ್ತೆ" "ನೋಡು, ನಾವಿಲ್ಲಿ ನಿಲ್ಲೋದಕ್ಕೆ ಸಾಧ್ಯವಿಲ್ಲ. ಡೆಹ್ರಾದಲ್ಲಿ ಅಲೆಯೋಕೆ ಆಗೋಲ್ಲ. ಅಲ್ಲದೆ ಸ್ಟೇಷನ್ ಒಳಗೆ ಹೋಗೋ ಹಾಗಿಲ್ಲ. ಆದ್ದರಿಂದ ನಾವು ನಡಿತಾನೇ ಇರಬೇಕಾಗುತ್ತೆ".

"ಹಾಗೇ ಆಗಲಪ್ಪಾ, ರಸ್ಟಿ, ನಾವು ನಡೆದುಕೊಂಡೇ ಹೋಗ್ತಿರೋಣ. ಯಾವುದೇ ಸಾಹಸವಾಗಲಿ, ಆರಂಭಿಸುವಾಗ ತುಂಬ ಕಠಿಣವಾಗೇ ಇರುತ್ತೆ."



# ಹುಲಿರಾಯ ಮತ್ತು ಎತ್ತಿನಗಾಡಿ

ಆಗಲೇ ಹೊಲ ಗದ್ದೆಗಳು ಮುಗಿದು ಕಾಡಿನ ದಾರಿ ಆರಂಭವಾಗಿತ್ತು. ಆದರೂ ಅಲ್ಲಲ್ಲಿ ರೈಲು ಹಳಿಯಾಚೆ ಕಬ್ಬಿನ ಗದ್ದೆಗಳು ವ್ಯಾಪಿಸಿದ್ದವು. "ನಾವಿನ್ನೂ ಎಷ್ಟು ದೂರ ನಡೀಬೇಕು?" ದಲ್‌ಜೀತ್ ಕೇಳಿದ.

"ನಾವು ಇದುವರೆಗೂ ನಾಲ್ಕು ಮೈಲಿ ನಡೆದಿದ್ದೇವೆ ಅಂತ ಕಾಣುತ್ತೆ. ಇನ್ನೂ ಆರು ಮೈಲಿ ಬಾಕಿ ಇದೆ! ಒಮ್ಮೊಮ್ಮೆ ಮನಸ್ಸು ಭಾರವಾಗಿದ್ದಾಗ ಒಂದೊಂದು ಮೈಲಿಯೂ ಎಷ್ಟೋ ದೂರ ಅನ್ನುವಂತಾಗುತ್ತದೆ. ಇದು ನಮ್ಮ ಭಾವನೆ ಹಾಗೂ ಯೋಚನೆಯನ್ನು ಅವಲಂಬಿಸಿರುತ್ತೆ. ನಾವು ಉಲ್ಲಾಸದಿಂದಿದ್ದಾಗ, ಎಷ್ಟು ಮೈಲಿ ನಡೆದರೂ ನಮಗೆ ದೂರ ಅನಿಸುವುದಿಲ್ಲ".

"ಹಾಗಾದರೆ ನಾವು ಸಂತೋಷಕರವಾದ ವಿಷಯಗಳ ಬಗ್ಗೆಯೇ ಯೋಚಿಸುತ್ತಾ ಹೋಗೋಣ. ಇಲ್ಲಿಂದ ಹತ್ತಿರದ ದಾರಿ ಯಾವುದೂ ಇಲ್ಲವೇ, ರಸ್ಟಿ? ನೀನು ಈ ರಾಯ್‌ವಾಲಾ ಕಾಡಿಗೆ ಮುಂಚೆ ಯಾವಾಗಲಾದರೂ ಬಂದಿದ್ದೆಯಾ?"

"ಬಂದಿರಬೇಕು ಅನ್ನಿಸುತ್ತದೆ" ಕಾಡುಬೆಂಕಿ ಹಾದಿಯಲ್ಲಿ ಹೋದರೆ ನಾವು ನಡೆಯಬೇಕಾದ ದೂರ ಮೂರು ಅಥವಾ ನಾಲ್ಕು ಮೈಲಿಗಳಷ್ಟಾದರೂ ಕಡಿಮೆಯಾಗುತ್ತೆ. ಆದರೆ ನಾವು ಒಂದು ಸಣ್ಣ ತೊರೆಯಲ್ಲಿ ಈಜಿಕೊಂಡೋ ಅಥವಾ ನೀರಿನಲ್ಲಿ ನಡೆದುಕೊಂಡೋ ಹೋಗಬೇಕಾಗುತ್ತೆ. ಮಳೆ ಈಗಲೇ ಶುರುವಾಗಿರುವುದರಿಂದ ನೀರು ಅಷ್ಟೇನೂ ರಭಸದಿಂದ ಹರಿಯುವುದಿಲ್ಲ, ಆಳವಾಗಿಯೂ ಇರುವುದಿಲ್ಲ."

ದಟ್ಟ ಕಾಡಿನಲ್ಲಿ ರಸ್ತೆಗಳು 'ಕಾಡನ್ನು ಅನೇಕ ಭಾಗಗಳಾಗಿ ವಿಭಜಿಸಿರುತ್ತವೆ. ಕಾಡು ಬೆಂಕಿ ಸುಲಭವಾಗಿ ಹರಡದಿರಲೆಂದು ಈ ರಸ್ತೆಗಳನ್ನು ಜನರು ಜಾಸ್ತಿ ಉಪಯೋಗಿಸುವುದಿಲ್ಲ. ಯಾಕೆಂದರೆ ಈ ರಸ್ತೆಗಳು ಯಾವುದೇ ವಿಶಿಷ್ಟ ಜಾಗಕ್ಕೆ ಸೇರುವುದಿಲ್ಲ; ಆದರೆ ಈ ರಸ್ತೆಗಳಲ್ಲಿ ದೊಡ್ಡ ಪ್ರಾಣಿಗಳೇ ಹೆಚ್ಚಾಗಿ ಅಡ್ಡಾಡುತ್ತವೆ.

ನಾವು ಈ ಹಾದಿಯಲ್ಲಿ ಒಂದು ಮೈಲಿದೂರದಷ್ಟು ಹೋದಾಗ ನಮಗೆ ನೀರು ದುಮುಕುವ ಶಬ್ದ ಕೇಳಿಸಿತು. ಸಾಲ್ ಮರಗಳ ಕಾಡಿನಿಂದ ಹೊರಟ ಈ ಹಾದಿ ಒಂದು ಸಣ್ಣ ನದಿಯ ದಡದಲ್ಲಿ ಕೊನೆಗೊಳ್ಳುತ್ತದೆ. ಈ ನದಿಯ ಮುಖ್ಯ ಸೇತುವೆ ಸುಮಾರು ಮೂರು ಮೈಲಿಯಷ್ಟು ದೂರ ಕೆಳಗೆ ಮುಖ್ಯರಸ್ತೆಯಲ್ಲಿತ್ತು "ಇಲ್ಲಿ ನೀರು ಸೊಂಟಮಟ್ಟಕ್ಕಿಂತ ಮೇಲಿಲ್ಲ" ನಾನೆಂದೆ. "ಆದರೆ ನೀರು ರಭಸದಿಂದ ಹರಿಯುತ್ತಿದೆ, ಅಲ್ಲದೆ ಕಲ್ಲುಗಳ ಮೇಲೆ ಕಾಲು ಜಾರುತ್ತದೆ". ನಾವು ನಮ್ಮ ಬಟ್ಟೆಗಳನ್ನು ತೆಗೆದು ಎಲ್ಲವನ್ನೂ ಎರಡು ಗಂಟು ಕಟ್ಟಿ ತಲೆಯ ಮೇಲೆ ಹೊತ್ತು ಕೊಂಡು ನಡೆದೆವು. ದಲ್‌ಜೀತ್ ಒಳ್ಳೆಯ ಮೈಕಟ್ಟಿನವನಿದ್ದ. ಅವನ ಕೈ ಕಾಲುಗಳು ಬಲವಾಗಿದ್ದವು. ನಾನು ಮಾತ್ರ ಹಗುರವಾಗಿ ಚೆಕ್ಕೆಯಂತಿದ್ದೆ. ಆದರೆ ನನಗೆ ಸಂದರ್ಭಕ್ಕೆ ತಕ್ಕಂತೆ ಚುರುಕಾಗಿ ವರ್ತಿಸುವ ಸಾಮರ್ಥ್ಯ ಇತ್ತು. ಆದ್ದರಿಂದ ಒಬ್ಬರಿಗೊಬ್ಬರು ನೆರವಾಗುವ ಬದಲು ಹೆಚ್ಚಾಗಿ ನಾವು ಮುಗ್ಗರಿಸಿ, ಒಬ್ಬರಿಗೊಬ್ಬರು ತೊಡಕಾಗುತ್ತಿದ್ದೆವು. ನಾವು ನಡುನೀರಿನಲ್ಲಿ ಸೊಂಟದವರೆಗೂ ಮುಳುಗಿ, ಮುಂದೆ ಹೋಗುವುದೋ ಬೇಡವೋ, ಎಲ್ಲಿ ಕೆಳಕ್ಕೆ ಕುಸಿದುಬಿಡುತ್ತೇವೋ ಎಂಬ ಹೆದರಿಕೆಯಿಂದ ನಿಂತುಬಿಟ್ಟೆವು.

"ನನಗೆ ನಿಂತುಕೊಳ್ಳುವುದಕ್ಕೇ ಆಗುತ್ತಿಲ್ಲ" ದಲ್‌ಜೀತ್ ಹೇಳಿದ. "ಪರಿಸ್ಥಿತಿ ಇದಕ್ಕಿಂತ ಜಾಸ್ತಿ ಹದಗೆಡುವುದಿಲ್ಲ." ನಾನು ಆಶಾಭಾವನೆಯಿಂದ ಹೇಳಿದೆ. ಆದರೆ ನೀರಿನ ಸೆಳೆತ ಜೋರಾಗಿತ್ತು. ನನ್ನ ಮಂಡಿಗಳು ಜೋಲಾಡುತ್ತಿರುವಂತೆ ಅನ್ನಿಸಿತು.

ದಲ್‌ಜೀತ್ ಮುಂದೆ ಹೋಗಲು ಪ್ರಯತ್ನಪಟ್ಟು, ಜಾರಿ ನನ್ನನ್ನೂ ಕೆಳಕ್ಕೆಳೆದುಕೊಂಡು ಹಿಂದಕ್ಕೆ ಹೋಗಿ ನೀರಿಗೆ ಬಿದ್ದ. ಅವನು ನೀರಿನಲ್ಲಿ ಒದೆಯುತ್ತಾ ಬಡಿಯುತ್ತಾ ಹೇಗೋ ನನ್ನ ಬೆಂಬಲದಿಂದ ತಿಮಿಂಗಲದಂತೆ ನೀರಿನ ಹೊರಗೆ ತಲೆ ಹಾಕಿದ.

ನಾವು ಕೊಚ್ಚಿಕೊಂಡು ಹೋಗಿಲ್ಲ ಎಂದು ಗೊತ್ತಾದಾಗ, ನಾವು ಹೆಣಗಾಡುವುದನ್ನು ಬಿಟ್ಟು ಎಚ್ಚರಿಕೆಯಿಂದ ಆಚೆ ದಡಕ್ಕೆ ಸಾಗಿದೆವು. ಆದರೆ ನೀರಿನ ಕೆಳಪ್ರವಾಹ ನಮ್ಮನ್ನು 20 ಗಜ ದೂರಕ್ಕೆ ಎಸೆಯಿತು. ನಾವು ಬಿಸಿ ಮರಳಿನ ಮೇಲೆ ವಿಶ್ರಾಂತಿ ಪಡೆದೆವು. ಸೂರ್ಯನ ತೀಕ್ಷ್ಣ ಬಿಸಿಲು ನಮ್ಮನ್ನು ಸುಡುತ್ತಿತ್ತು. ದಲ್‌ಜೀತ್ ತರಚಿಕೊಂಡ ಕೈಯನ್ನು ನೆಕ್ಕಿದ. ಹಸಿವಾಗಿದ್ದರಿಂದ, ಬಿಸ್ಕೆಟ್ ಕುರುಕುತ್ತಾ ಪುನಃ ಮುಂದುವರಿದೆವು. "ನಾವು ಜಾಸ್ತಿ ದೂರ ಹೋಗಲಾರೆವೇನೋ" ನಾನೆಂದೆ. ಕಾಡಿನ ದಾರಿಯಲ್ಲಿ ಅತ್ತಿತ್ತ ಓಡಾಡಿ ಸುಸ್ತಾದೆವು. ಆದರೂ ನಮ್ಮ ಉತ್ಸಾಹ ಕುಂದಲಿಲ್ಲ. ಆಮೇಲೆ ಒಂದು ತಿರುವು ಬಂದಾಗ ಇದ್ದಕ್ಕಿದ್ದಂತೇ ಹುಲಿ ಎದುರಿಗೆ ಬರುವುದನ್ನು ಕಂಡೆವು! ಏಕ್‌ದಮ್ ಮುಖಾಮುಖಿಯಲ್ಲ, ಹುಲಿರಾಯ ನಮ್ಮಿಂದ 15 ಗಜ ದೂರದಲ್ಲಿ ಸರಿಯಾಗಿ ರಸ್ತೆಯ ಮಧ್ಯದಲ್ಲಿ ನಿಂತಿದ್ದ. ಅದೂ ಸಹ ನಮ್ಮನ್ನು ನೋಡಿ ಬೆರಗಾಗಿರಬೇಕು. ನಾವು ಹುಲಿಯನ್ನು ನೋಡಿ ಬೆರಗಾದಂತೆ ಅದೂ ತನ್ನ ದೊಡ್ಡ ತಲೆಯನ್ನು ಮೇಲಕ್ಕೆತ್ತಿತ್ತು. ಅದರ ದೊಡ್ಡಬಾಲ ಆ ಕಡೆಯಿಂದ ಈ ಕಡೆಗೆ ತೂಗಾಡುತ್ತಿತ್ತು. ಹುಲಿರಾಯ ನಮ್ಮ ಕಡೆ ಹೆಜ್ಜೆ ಇಡುವ ಪ್ರಯತ್ನ ಮಾಡಲಿಲ್ಲ. ನಾವು ಕಲ್ಲಿನಂತೆ

ರಸ್ತೆಯ ಮಧ್ಯದಲ್ಲಿ ಅಳ್ಳಾಡದೇ ನಿಂತೆವು. ನಾವು ತುಂಬಾ ಹೆದರಿದ್ದೆವು ಹಾಗೂ ಚಕಿತರಾಗಿದ್ದೆವು. ಅದು ಒಂದು ತರಹ ಒಳ್ಳೆಯದೇ ಆಗಿತ್ತು. ಯಾಕೆಂದರೆ ನಾವು ಓಡಿಹೋಗಿದ್ದರೆ ಅಥವಾ ಕಿರುಚಿಕೊಂಡಿದ್ದರೆ ಹುಲಿ ಜಾಗೃತಗೊಂಡು ನಮ್ಮ ಮೇಲೆ ಎಗರಿ ಬೀಳುತ್ತಿತ್ತು. ಆದರೆ ಹುಲಿ ಮನುಷ್ಯರನ್ನು ಕಂಡರೆ ಹೆದರುತ್ತಿರಲಿಲ್ಲ, ಅಲ್ಲದೆ ಅದು ನರ ಭಕ್ಷಕ ಹುಲಿಯೂ ಆಗಿರಲಿಲ್ಲ. ಒಂದು ಕ್ಷಣ ಅನುಮಾನಿಸಿ ನಿಶ್ಶಬ್ದವಾಗಿ ಕಾಡಿನೊಳಗೆ ಹೊರಟು ಹೋಯಿತು.

ನಮಗೆ ಹೋದ ಜೀವ ಬಂದಂತಾದ ಮೇಲೆ ದಲ್‌ಜೀತ್ ನನ್ನ ಕಿವಿಯಲ್ಲಿ ಪಿಸುಗುಟ್ಟಿದ "ನನಗೆ ನೀನು ಹುಲಿ ಇಲ್ಲಿರುತ್ತೆ ಎಂದು ಹೇಳಲೇ ಇಲ್ಲ!"

"ನನಗೆ ಅದರ ಯೋಚನೆಯೇ ಬರಲಿಲ್ಲ", ಅದಂತೂ ನಿಜ.

"ಹುಲಿಗಳು ಇಲ್ಲಿ ಜಾಸ್ತಿ ಇಲ್ಲ...."

"ನಮ್ಮನ್ನು ಮುಗಿಸಲು ಒಂದೇ ಸಾಕು. ದಲ್‌ಜೀತ್ ಹೇಳಿದ. "ನಾವೀಗಮುಂದಕ್ಕೆ ಹೋಗೋದೋ ಅಥವಾ ಹಿಂದಕ್ಕೋ?"

"ಮುಂದಕ್ಕೆ. ನೀನು ಪುನಃ ನೀರಿನಲ್ಲಿ ಹೆಣಗಾಡಲು ಇಷ್ಟಪಟ್ಟರೆ ಅದು ಬೇರೇ ಮಾತು. ಹುಲಿಗೆ ನಮ್ಮ ಮೇಲೆ ಆಸಕ್ತಿ ಇಲ್ಲ."

"ಹಾಗಾದರೆ ಮುಂದೆ ನಡಿ," ದಲ್‌ಜೀತ್ ಹೇಳಿದ. ನಾವು ಬೆಂಕಿ ಹಾದಿಯಲ್ಲಿ ಕೆಳಗಿಳಿಯಲು ಪ್ರಾರಂಭಿಸಿದೆವು... ದಾರಿಯಲ್ಲಿ ನಾವು ಇನ್ಯಾವ ಪ್ರಾಣಿಗಳನ್ನೂ ಕಾಣಲಿಲ್ಲ. ನಾವು ಬರುತ್ತಿದ್ದಂತೆ ರೆಕ್ಕೆ ಬಡಿಯುತ್ತಾ ಹಾರಿ ಹೋಗುತ್ತಿದ್ದ ಕೆಲವು ಸುಂದರ ನವಿಲುಗಳನ್ನು ಮಾತ್ರ ಕಂಡೆವು. ಬೇಗ ನಾವು ಮುಖ್ಯ ರಸ್ತೆಗೆ ಬಂದೆವು. ಅಕ್ಕ ಪಕ್ಕದಲ್ಲಿ ಹೊಲಗದ್ದೆಗಳೂ ಹಳ್ಳಿಗಳೂ ಇದ್ದವು. ಬೆಟ್ಟದ ತಪ್ಪಲಿನಿಂದ ಬೀಸಿದ ತಂಗಾಳಿ ಬಯಲನ್ನು ಹಾಯ್ದುಹೋಯಿತು. ಹೊಲದಲ್ಲಿ, ಗಾಳಿ ಬೀಸಿದೊಡನೆ ಬೆತ್ತದ ಕಡ್ಡಿಗಳು ತೂಗಾಡಿದವು. ಗಾಳಿ ರಸ್ತೆಯ ಮೇಲೆ ಬೀಸಿದಾಗ ನಮ್ಮ ಸುತ್ತ ಧೂಳು ಸುರುಳಿ ಸುರುಳಿಯಾಗಿ ಸುತ್ತಿತ್ತು. ಧೂಳಿನ ಮಧ್ಯದಲ್ಲಿ ನಮ್ಮ ಹಿಂದೆ, ಗಾಡಿಯ ಚಕ್ರ ಉರುಳುವ ಶಬ್ದ ಕೇಳಿಬಂತು. ಹೋ ಹೊಯ್ಹಾ! ಹೊಯ್ಹಾ! ಗಾಡಿಚಾಲಕ ಅಬ್ಬರಿಸಿದ. ಎತ್ತುಗಳು ಧೂಳನ್ನು ಸೀಳಿಕೊಂಡು ಅಡ್ಡಾದಿಡ್ಡಿಯಾಗಿ ರಭಸದಿಂದ ಹೆಜ್ಜೆ ಹಾಕುತ್ತಾ ಮುಂದೆ ಬಂದವು.

ಗಾಡಿಗೆ ಜಾಗ ಬಿಟ್ಟು ನಾವು ರಸ್ತೆಯ ಬದಿಗೆ ಹೋದೆವು. "ಗಾಡಿ ರಾಯ್‌ವಾಲಾಕಡೆಗೆ ಹೋಗುವುದಾ?" ದಲ್‌ಜೀತ್ ಕೂಗಿ ಕರೆದ. "ನಮ್ಮನ್ನೂ ನಿನ್ನ ಜೊತೆ ಕರೆದುಕೊಂಡು ಹೋಗುವೆಯಾ?"

"ಹತ್ತಿಕೊಳ್ಳಿ!" ಅವನೆಂದ. ನಾವು ಧೂಳಿನಲ್ಲಿ ಓಡಿಹೋಗಿ ನಡೆಯುತ್ತಿದ್ದ ಗಾಡಿಯ ಹಿಂಭಾಗವನ್ನು ಏರಿದೆವು. ಅದು ಓಲಾಡುತ್ತಾ ಗಡಗಡ ಶಬ್ದ ಮಾಡುತ್ತ ಕುಲುಕಿಸುತ್ತಿತ್ತು. ನಾವು ಬೀಳದಂತೆ ಅದರ ಪಕ್ಕಗಳಿಗೆ ಗಟ್ಟಿಯಾಗಿ ಅಂಟಿಕೊಂಡು ಇರಬೇಕಾಗಿತ್ತು. ಅದು ಹುಲ್ಲು ಒಂದಲಗ ಮತ್ತು ಬೆರಣಿ ವಾಸನೆಯಿಂದ ತುಂಬಿತ್ತು. ಚಾಲಕ ತನ್ನ ತಲೆಗೆ ಒಂದು ಕೆಂಪು ಬಟ್ಟೆ ಸುತ್ತಿಕೊಂಡು, ಬಿಗಿಯಾದ

ಬನಿಯನ್ ಹಾಕಿಕೊಂಡು ಪಂಚೆ ಉಟ್ಟಿದ್ದ. ಅವನು ಬೀಡಿ ಸೇದುತ್ತಾ ತನ್ನ ಎತ್ತುಗಳನ್ನು ಗದರಿಸುತ್ತಿದ್ದ. ನಾವು ಗಾಡಿಯಲ್ಲಿ ಕುಳಿತಿರುವುದನ್ನೇ ಅವನು ಮರೆತಂತೆ ಕಾಣುತ್ತಿತ್ತು. ನಾವೂ ಮಾತನಾಡುವ ತಂಟೆಗೆ ಹೋಗದೆ ಗಾಡಿಯ ಪಕ್ಕಕ್ಕೆ ಅಂಟಿಕೊಂಡು ಕುಳಿತಿದ್ದೆವು. ರಾಯ್‌ವಾಲಾ ಒಂದು ಸಣ್ಣ ಊರಾದರೂ ವ್ಯಾಪಾರ ಸ್ಥಳ. ನಾವು ರಾಯ್‌ವಾಲಾ ವಾಹನಗಳ ಮಧ್ಯೆ ಸಿಕ್ಕುಹಾಕಿಕೊಳ್ಳುವ ಮುಂಚೆಯೇ ಎತ್ತಿನ ಗಾಡಿಯಿಂದ ಹಾರಿ, ಅದರ ಪಕ್ಕದಲ್ಲಿ ನಡೆದು ಹೋದೆವು.

"ಅವನಿಗೇನಾದರೂ, ನಾವು ದುಡ್ಡು ಕೊಡೋಣವೇ?" ನಾನು ಕೇಳಿದೆ. "ಇಲ್ಲ ಅವನಿಗೆ ಮನಸ್ಸಿಗೆ ನೋವಾಗುತ್ತೆ. ಅವನೇನು ಟಾಕ್ಸಿ ಚಾಲಕನಲ್ಲ."

"ಸರಿ ಹಾಗಾದರೆ, ಅವನಿಗೆ ಧನ್ಯವಾದಗಳನ್ನಾದರೂ ಹೇಳೋಣ".

ನಾವು ಗಾಡಿಯವನನ್ನು ಕೂಗಿ ಕರೆದು ನಮ್ಮ ಧನ್ಯವಾದಗಳನ್ನು ಹೇಳಿದೆವು. ಆದರೆ ಅವನು ಹಿಂತಿರುಗಿ ನೋಡಲಿಲ್ಲ. ಅವನು ತನ್ನ ಎತ್ತುಗಳ ಜೊತೆ ಮಾತನಾಡುತ್ತಿದ್ದಂತೆ ಕಾಣಿಸಿತು.

"ನನಗೆ ಹಸಿವಾಗ್ತಿದೆ" ದಲ್‌ಜೀತ್ ಹೇಳಿದ. "ನಿನ್ನೆ ರಾತ್ರಿಯಿಂದ ಸರಿಯಾಗಿ ಊಟಮಾಡಿಲ್ಲ".

"ಹಾಗಾದರೆ ನಡಿ ಊಟ ಮಾಡೋಣ".

ಇಕ್ಕಟ್ಟಾದ ರಾಯ್‌ವಾಲಾ ಪೇಟೆ ಒಳಗೆ ನಡೆಯುತ್ತಾ ಹೋದೆವು. ಟೀ ಮತ್ತು ಮಿಠಾಯಿ ಅಂಗಡಿಗಳನ್ನು ಹುಡುಕುತ್ತಾ ಕೊನೆಗೆ ಒಂದು ಅತ್ಯಂತ ಕಡಿಮೆ ಬೆಲೆಯ ಢಾಬಾ ಕಂಡು ಅಲ್ಲಿ ನಿಂತೆವು. ಒಬ್ಬ ಕೆಲಸದ ಹುಡುಗ ನಮಗೆ ಅನ್ನ ಮತ್ತು ತೊವ್ವೆ ತಂದ. ದಲ್‌ಜೀತ್ ಒಂದು ಚಟಾಕು ತುಪ್ಪ ತರಲು ಆಜ್ಞಾಪಿಸಿದ; ಅವನು ಅದನ್ನು ತಂದು ಪಲ್ಯದ ಮೇಲೆ ಸುರಿದ. ಊಟದ ಬೆಲೆ ಬರೀ ಎರಡು ರೂಪಾಯಿ ಮಾತ್ರ. ಆದರೆ ನಮಗೆ ಎಷ್ಟು ಬೇಕೋ ಅಷ್ಟು ತೊವ್ವೆ ಹಾಕಿಸಿಕೊಳ್ಳಬಹುದಿತ್ತು. ನಾವಿಬ್ಬರೂ ಸೇರಿ ನಾಲ್ಕು ಬಟ್ಟಲು ತೊವ್ವೆ ಮುಗಿಸಿದೆವು.

"ರೈಲ್ವೇ ನಿಲ್ದಾಣದಲ್ಲಿ ವಿಶ್ರಾಂತಿ ಪಡೆಯೋಣ, ಢಾಬಾದಿಂದ ಬರುತ್ತಾ ನಾವು ಸೆಕೆಂಡ್ ಕ್ಲಾಸ್ ಟಿಕೆಟ್ ಕೊಂಡುಕೊಳ್ಳೋಣ ಮತ್ತು ಫಸ್ಟ್‌ಕ್ಲಾಸ್ ವೈಟಿಂಗ್ ರೂಮ್‌ನಲ್ಲಿ ಯಾರೂ ನಮ್ಮನ್ನು ನೋಡೊಲ್ಲ. ನಾವು ಫಸ್ಟ್‌ಕ್ಲಾಸ್ ಪ್ರಯಾಣಿಕರಂತೆ ಕಾಣುತ್ತೇವಲ್ಲವೇ?"

"ಆ ತರಹ ನಡೆದುಕೊಂಡು ಕಾಡಿನಿಂದ ಬಂದ ಮೇಲಂತೂ ನಾವು ಖಂಡಿತ ಹಾಗೆ ಕಾಣಿಸುವುದಿಲ್ಲ" ಎಂದ ದಲ್‌ಜೀತ್. ನಾವು ಅತ್ಯುತ್ತಮ ವೈಟಿಂಗ್ ರೂಂನಲ್ಲಿ ತಳವೂರಿದೆವು. ದಲ್‌ಜೀತ್ ಆರಾಮ ಕುರ್ಚಿಯ ಮೇಲೆ ನಿರಾಳವಾಗಿ ಪವಡಿಸಿದ. "ಗಾಡಿ ಬಂದಾಗ ನನ್ನನ್ನು ಎಬ್ಬಿಸು" ಅರೆಸಿದ್ದೆಯಲ್ಲಿ ಅವನೆಂದ. ನಾವು ಹೆಚ್ಚು ಸಮಯ ಕಾಯಬೇಕಾಗಲಿಲ್ಲ. ಬಾಗಿಲಿಗೆ ಒರಗಿಕೊಂಡು ರೈಲು ಹಳಿಗಳನ್ನು ತದೇಕ ದೃಷ್ಟಿಯಿಂದ ನೋಡುತ್ತಿದ್ದಾಗ, ಬರುತ್ತಿರುವ ಗಾಡಿಯ ಸಿಳ್ಳೆಯನ್ನು ಕೇಳಿದ. ಜೋರಾಗಿ ಬುಸುಗುಟ್ಟುತ್ತಾ ಹವೆಯ ತರಂಗಗಳನ್ನು ಬಿಡುತ್ತಾ ರೈಲು ಬರುತ್ತಿದ್ದಂತೆಯೇ ಜನರು ಮುನ್ನುಗ್ಗಲು ಶುರು

ಮಾಡಿದರು. ಅದೇ ಸಮಯಕ್ಕೆ ಬೋಗಿಗಳ ಬಾಗಿಲು ತೆರೆದುಕೊಂಡು ಪ್ರಯಾಣಿಕರು ಹೊರಬರಲು ಶುರುಮಾಡಿದರು.

ನಾನು ದಲ್‌ಜೀತ್‌ನನ್ನು ಅಲುಗಾಡಿಸಿ ಎಬ್ಬಿಸಬೇಕಾಯಿತು. ನಾವು ಫ್ಲಾಟ್‌ಫಾರಂಗೆ ಬಂದು ಆ ನೂಕುನುಗ್ಗಲಲ್ಲಿ ಸೇರಿಕೊಂಡೆವು. ಗಂಡಸರು, ಹೆಂಗಸರು ಮತ್ತು ಮಕ್ಕಳು ನೂಕುನುಗ್ಗಲಿಗೆ ಸಿಕ್ಕಿ ಮುಂದೆ ಹೋಗಲು ಹೆಣಗಾಡುತ್ತಿದ್ದರು. ಸ್ವಲ್ಪ ಹೊತ್ತು ಯಾರಿಗೂ ರೈಲು ಡಬ್ಬಿಯೊಳಗೆ ಹೋಗಲು ಅಥವಾ ಹೊರಬರಲು ಆಗಲಿಲ್ಲ. ಗಂಟು ಮೂಟೆಗಳನ್ನು ಜನ ಕಿಟಕಿ ಒಳಗೆ ತೂರಿಸುತ್ತಿದ್ದರು. ಎಷ್ಟೋ ಯುವಕರು ಕಿಟಕಿ ಹತ್ತಿ ಮೊದಲು ತಲೆ ತೂರಿಸಿ ಹಿಂದುಗಡೆಯಿಂದ ತಳ್ಳಿಸಿಕೊಂಡು ಒಳಗೆ ಹೋದರು. ದಲ್‌ಜೀತ್ ಮತ್ತು ನಾನು ನಮ್ಮ ಮೂಟೆಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದೆವು. ನೂಕುನುಗ್ಗಲಲ್ಲಿ ಸಿಕ್ಕಿ ಹಾಕಿಕೊಂಡಿದ್ದ ನಮ್ಮನ್ನು ಜನಜಂಗುಳಿಯೇ ನೂಕಿ, ಡಬ್ಬಿಯೊಳಗೆ ಸೇರಿಕೊಳ್ಳಲು ಅನುಕೂಲ ಮಾಡಿಕೊಟ್ಟಿತು. ನಾವು ಒಂದು ಮೂಲೆಯಲ್ಲಿ ಎಲ್ಲಾ ಸರಿಪಡಿಸಿಕೊಂಡು ಕುಳಿತುಕೊಳ್ಳುವ ಹೊತ್ತಿಗೆ ಗಾಡಿ ಚಲಿಸಿತ್ತು. ಇನ್ನೂ ಒಬ್ಬರೋ ಇಬ್ಬರೋ ಬಾಗಿಲು ಮತ್ತು ಕಿಟಕಿಗೆ ಜೋತು ಬಿದ್ದಿದ್ದರು. ಅವಕಾಶ ಸಿಕ್ಕಾಗ ಡಬ್ಬಿಯೊಳಗೆ ತೂರಿಕೊಳ್ಳಲು ಅವರು ಪ್ರಯತ್ನಪಡುತ್ತಿದ್ದರು. ನಾನು ಕಿಟಕಿಯ ಹತ್ತಿರ ಇದ್ದೆ. ಗಾಡಿಯ ವೇಗ ಹೆಚ್ಚುತ್ತಿದ್ದಂತೆ ಮಾವಿನತೋಪು, ಹಳ್ಳಿಗಳು, ಟೆಲಿಗ್ರಾಫ್ ಕಂಬಗಳು ವೇಗವಾಗಿ ನಮ್ಮ ಕಣ್ಣ ಮುಂದೆ ಸಾಗುತ್ತಿದ್ದವು. ನಾವು ನಿಜವಾಗಿಯೂ ನಮ್ಮ ಗುರಿಯೆಡೆಗೆ ಸಾಗುತ್ತಿದ್ದೇವೆಂದು ಆಗ ನನಗನ್ನಿಸಿತು. ನಮಗೆ ಗೊತ್ತಿರದಿದ್ದ ಗುರಿಯತ್ತ ನಾವು ಸಾಗುತ್ತಿದ್ದೆವು. ನಾನು ಉತ್ತೇಜಿತನಾಗಿ ದಲ್‌ಜೀತ್‌ನ ತೋಳನ್ನು ಅಮುಕಿ ಹಿಡಿದೆ.

"ನಾವು ನಮ್ಮ ಹಾದಿಗೆ ಬಂದಿದ್ದೇವೆ".

ನಿದ್ರಿಸುತ್ತಿದ್ದ ಧಡೂತಿ ವ್ಯಕ್ತಿಯೊಬ್ಬನ ದೇಹದ ಅಡಿಯಲ್ಲಿ ಸಿಕ್ಕಿಹಾಕಿಕೊಂಡಿದ್ದ ತನ್ನ ಬೆನ್ನುಚೀಲವನ್ನು ಹೊರಗೆ ಎಳೆಯುತ್ತಾ "ಅದು ಸ್ಪಷ್ಟವಾಗಿದೆ" ದಲ್‌ಜೀತ್ ಹೇಳಿದ. ಆದರೆ ನನ್ನ ಮನಸ್ಸಿನಲ್ಲಿ ಏನಿದೆ ಎಂಬುದು ದಲ್‌ಜೀತ್‌ಗೆ ಗೊತ್ತಿತ್ತು. ಬೆನ್ನುಚೀಲ ಎಳೆದುಕೊಂಡ ನಂತರ, ಅವನು ನನ್ನ ಕಡೆ ನೋಡಿ ಹಲ್ಲು ಕಿರಿದ. ಅವನ ಚುರುಕುತನವನ್ನು ಅವನ ಕಣ್ಣುಗಳೇ ಹೊರಸೂಸುತ್ತಿದ್ದವು.

## ಸ್ವಲ್ಪದರಲ್ಲಿ ಪಾರು

ಹಳೇ ಡೆಲ್ಲಿ ನಿಲ್ದಾಣದಲ್ಲಿ ನಾವು ರೈಲಿನಿಂದ ಇಳಿದೆವು. ಸಭ್ಯರಂತೆ, ನಾವು ದೃಢ ವಿಶ್ವಾಸದಿಂದ ಮುನ್ನುಗ್ಗಿ ಹೋಗಿ, ಟಿಕೆಟ್ ಕಲೆಕ್ಟರ್ ಕೈಲಿ ಟಿಕೆಟ್ ಕೊಡಲು ಮುಂದುವರಿಸಿದ್ದೆವು. ಜನಸಂದಣಿ ದಟ್ಟವಾಗಿತ್ತು. ನಡಿಗೆ ನಿಧಾನವಾಗಿತ್ತು. ಅದೂ ಒಂದು ತರಹ ಒಳ್ಳೆಯದೇ ಆಗಿತ್ತು. ಏಕೆಂದರೆ ಹೊರಗೆ ಹೋಗುವ ಬಾಗಿಲಿನಿಂದ ಕೇವಲ 30 ಅಡಿ ದೂರದಲ್ಲಿದ್ದಾಗ, ಟಿಕೆಟ್ ಕಲೆಕ್ಟರ್‌ನೊಡನೆ ಮಾತನಾಡುತ್ತಿದ್ದ ನಮ್ಮ ಗಣಿತದ ಅಧ್ಯಾಪಕ ಜೈನ್ ಅವರನ್ನು ನಾನು ನೋಡಿದೆ.

ಶ್ರೀ ಜೈನ್ ಅರುಂಡೇಲ್‌ನಲ್ಲಿ ಅತ್ಯಂತ ಸಮರ್ಥ ಮಾಸ್ತರರಾಗಿದ್ದರು. ನಮ್ಮನ್ನು ಹುಡುಕುವುದಕ್ಕಾಗಿ ಅವರನ್ನು ಕಳುಹಿಸಿರುವುದು ಸ್ಪಷ್ಟವಾಗಿತ್ತು. ಅವರು ಕನ್ನಡಕ ಹಾಕಿಕೊಳ್ಳುತ್ತಿದ್ದರು. ಅವರು ಚಾಣಾಕ್ಷರಾಗಿದ್ದರು. ನಮ್ಮನ್ನು ಎಲ್ಲಿ ತಡೆದು ನಿಲ್ಲಿಸಬಹುದೆಂಬುದನ್ನು ಚೆನ್ನಾಗಿ ತಿಳಿದಿದ್ದರು. ನಾವು ಹೊರಗೆ ಹೋಗುವ ದಾರಿಯಿಂದ ಹೇಗಾದರೂ ತಪ್ಪಿಸಿಕೊಳ್ಳಬೇಕಾಗಿತ್ತು. "ನಾವು ಇಲ್ಲಿಂದ ಹೊರಟುಹೋಗೋಣ" ನಾನು ದಲ್‌ಜೀತ್‌ನನ್ನು ಹಿಡಿದೆಳೆದು ಆವೇಶದಿಂದ ಪಿಸುಗುಟ್ಟಿದೆ.

"ಏಕೆ?" ದಲ್‌ಜೀತ್ ಕೇಳಿದ. ಅವನು ಶ್ರೀ ಜೈನರನ್ನು ನೋಡಿರಲಿಲ್ಲ.

"ನಿನಗೆ ಕಾಣಿಸುತ್ತಿಲ್ಲವೇ? ಟಿಕೆಟ್ ಕಲೆಕ್ಟರ್ ಜೊತೆ ನಿಂತಿರುವವರು ಯಾರು ನೋಡು!" ಎಂದೆ. ದಲ್‌ಜೀತ್ ಕಣ್ಮರೆಯಾಗುವ ಅವಸರದಲ್ಲಿ ಮುಗ್ಗರಿಸಿದ. ಜನಸಮೂಹ ಹೊರಗೆ ಹೋಗಲು ತನ್ನಷ್ಟಕ್ಕೆ ತಾನೇ ನಮ್ಮನ್ನು ನೂಕುತ್ತಿತು. ನಾವು ಯಾವುದಕ್ಕೂ ಎಡೆಕೊಡದೆ ಜನರನ್ನು ಗೋಡೆಗೆ ದಬ್ಬಿದ್ದೆವು. ಆಗಲೇ ಶ್ರೀ ಜೈನ್ ನಮ್ಮನ್ನು ಗುರುತಿಸಿದ್ದರು. ನಮಗೆ ಅವರ ಕೂಗು ಕೇಳಿಸಿತು.

"ಹುಡುಗರಾ, ಬನ್ನಿ ಇಲ್ಲಿ! ರಸ್ಕಿ! ದಲ್‌ಜೀತ್!"

ಒಂದು ಕ್ಷಣ, ನಾನು ನಮ್ಮ ಮಾಸ್ತರ ಧ್ವನಿಗೆ ಓಗೊಡುವುದರಲ್ಲಿದೆ; ಆದರೆ ಅದೇ ಸಮಯದಲ್ಲಿ ನನ್ನ ಕಣ್ಣ ಮುಂದೆ ಶಾಲೆಯ ತರಗತಿಗಳು, ನಿದ್ರಾಶಾಲೆಗಳು ಮತ್ತು

ಪ್ರಾಂಶುಪಾಲರ ಇಲಿ ಮೂತಿಯಂತಹ ಸಿಡುಕು ಮುಖ ಎಲ್ಲವೂ ನನ್ನ ಕಣ್ಮುಂದೆ ಹಾದುಹೋದವು. ಆದಷ್ಟು ಬೇಗ ತಪ್ಪಿಸಿಕೊಳ್ಳಬೇಕೆನಿಸಿತ್ತು. ನನಗೆ ಸಮುದ್ರವನ್ನು ತಲುಪಿ ನನ್ನ ಚಿಕ್ಕಪ್ಪನ ಹಡಗನ್ನುಮುಟ್ಟವವರೆಗೂ ಒಂದೇ ಸಮ ಓಡುತ್ತಿರೋಣವೆನಿಸಿತ್ತು.

ದಲ್‌ಜೀತ್ ಒಂದು ಕ್ಷಣವೂ ಹಿಂದು-ಮುಂದು ನೋಡದೆ ಎತ್ತರವಾದ ಜಾಟ್ ರೈತನ ಕಾಲುಗಳ ಅಡಿಯಲ್ಲಿ ತೂರಿದ. ಆಗ ದಲ್‌ಜೀತ್ ತನ್ನ ಪಗಡಿಯನ್ನು ಕಳೆದುಕೊಂಡೇ ಬಿಟ್ಟಿದ್ದ. ನಾನು ಇಬ್ಬರು ಕಟ್ಟಮಸ್ತಾದ ಪಂಜಾಬಿ ಹೆಂಗಸರ ಮಧ್ಯೆ ಇದ್ದ ಜಾಗದಲ್ಲಿ ತಲೆ ತೂರಿಸಿದೆ. ಆದರೆ ನಾನು ಪೂರ್ತಿ ಹೊರಗೆ ತೂರಿಕೊಳ್ಳುವ ಮೊದಲೇ ಅವರು ಸಮಕ್ಕೆ ಬಂದು ಜಾಗವಿಲ್ಲದಂತೆ ಮಾಡಿಬಿಟ್ಟರು. ಅದರ ಪರಿಣಾಮ ಕೈ ಕಾಲುಗಳು ಹೆಣೆದುಕೊಂಡುಬಿಟ್ಟವು. ಮಾಸ್ತರು ನನ್ನ ಹಿಂದೆಯೇ ಬಹಳ ಹತ್ತಿರದಲ್ಲಿದ್ದರು. ಆಗಲೇ ಒಬ್ಬ ಕೂಲಿ ರಭಸದಿಂದ ನಿಲ್ದಾಣದಿಂದ ಗಾಡಿಯ ಕಡೆ ಮುನ್ನುಗ್ಗಿ ಬಂದು ಜೈನ್‌ಗೆ ಢಿಕ್ಕಿ ಹೊಡೆದ.

ಶ್ರೀ ಜೈನ್ ಉರುಳಿ ಬಿದ್ದರು. ಅವರ ಕನ್ನಡಕ ಕಳೆದುಹೋಯಿತು. ನಾನು ಆ ಹೆಂಗಸರಿಂದ ಬಿಡಿಸಿಕೊಂಡು ಬಹಳ ದೂರದಲ್ಲಿದ್ದ ದಲ್‌ಜೀತ್ ಹಿಂದೆ ಓಡಿದೆ. ಅವನು ತನ್ನ ಮುಷ್ಟಿ ಮತ್ತು ಮೊಳಕೈನಿಂದ ಜನ ಸಮೂಹದಲ್ಲಿ ದಾರಿ ಮಾಡಿಕೊಳ್ಳುತ್ತಿದ್ದ. ಅವನು ಒಂದು ಸಲ ನಿಂತು ನಾನು ಬಿಡಿಸಿಕೊಂಡು ಬಂದೆನೋ ಇಲ್ಲವೋ ನೋಡಲು ಹಿಂದಿರುಗಿದ.ನಂತರ "ಬಾರೋ ರಸ್ಟಿ! ರೈಲುಮಾರ್ಗ ದಾಟಿಕೊಂಡು!" ಎಂದು ಅವನು ಕೂಗಿದ. ಅವನು ಪ್ಲಾಟ್‌ಫಾರ್ಮ್‌ನಿಂದ ಹೊರಡಲು ಕಾಯುತ್ತಿದ್ದ ರೈಲಿನ ಎರಡು ಡಬ್ಬಿಗಳ ಮಧ್ಯೆ ನುಸುಳಿಕೊಂಡು ಹೋದ. ಇಷ್ಟವಿಲ್ಲದೆ ನಾನು ಅವನನ್ನುಹಿಂಬಾಲಿಸಿದೆ. ನನಗೆ ಯಾವಾಗಲೂ ರೈಲು ಹಳಿಗಳನ್ನು ದಾಟಲು ಏನೋ ಒಂದು ರೀತಿ ಗಾಬರಿ ಆಗುತ್ತಿತ್ತು. ಅಲ್ಲದೆ ನಾನು ನಿಸ್ಸಹಾಯಕನಾಗಿ ರೈಲುಹಳಿ ಮೇಲೆ ಮಲಗಿರುವಂತೆಯೂ, ಆಗ ಒಂದು ಉಗಿ ಬಂಡಿ ಗುಡುಗುಟ್ಟುತ್ತಾ ನನ್ನ ಕಡೆ ಬರುತ್ತಿರುವಂತೆಯೂ ದುಃಸ್ವಪ್ನ ಬೀಳುತ್ತಿತ್ತು. ರೈಲುಬಂಡಿ ಮೂರಡಿ ದೂರವಿದೆ ಎನ್ನುವಾಗ ನನಗೆ ಎಚ್ಚರವಾಗಿಬಿಡುತ್ತಿತ್ತು. ಆಗ ಕೊನೆಘಳಿಗೆಯಲ್ಲಿ ಎಚ್ಚರವಾಗದೆ ಹೋಗಿದ್ದರೆ ಏನು ಅನಾಹುತವಾಗಿಬಿಡುತ್ತಿತ್ತೋ ಎಂದು ನನಗೆ ವಿಸ್ಮಯವಾಗುತ್ತಿತ್ತು!

ದಲ್‌ಜೀತ್ ಆಗಲೇ ಎರಡು ಜೊತೆ ರೈಲ್ವೇ ಹಳಿಗಳನ್ನು ದಾಟಿ ಪಕ್ಕದಲ್ಲಿದ್ದ ಕಂಬಿಯ ಕಟಕಟೆಯನ್ನು ಹತ್ತುತ್ತಿದ್ದ. ನಾನು ಎಡಕ್ಕೆ ನೋಡಿದೆ, ಆಮೇಲೆ ಬಲಕ್ಕೆ, ನಂತರ ಎಡಕ್ಕೆ. ದೂರದಲ್ಲಿ ಒಂದು ಹಳಿಯಿಂದ ಇನ್ನೊಂದು ಹಳಿಗೆ ಬದಲಾಯಿಸುತ್ತಿದ್ದ ಇಂಜಿನ್ ನೋಡಿದೆ. ಅದು ತುಂಬಾ ದೂರದಲ್ಲಿತ್ತು. ನನಗೆ ರೈಲು ಹಳಿಗಳನ್ನು ದಾಟಿ ದಲ್‌ಜೀತನನ್ನು ಸೇರಿಕೊಳ್ಳಲು ಸಾಕಷ್ಟು ಸಮಯವಿತ್ತು. ಆದರೆ ನನಗೆ ಬುದ್ಧಿ ಸ್ವಾಧೀನದಲ್ಲಿಲ್ಲದಂತಾಗಿ ಹಣೆ, ಅಂಗೈಗಳೆಲ್ಲಾ ಬೆವರಲು ಶುರುವಾಯಿತು.

"ಬಂದು ಬಿಡೋ" ದಲ್‌ಜೀತ್ ಆತುರದಿಂದ ಕರೆದ. ನಾನು, ಒಂದು ದೀರ್ಘ ಉಸಿರೆಳೆದುಕೊಂಡು ನೇರವಾಗಿ ಮುಂದೆ ನೋಡುತ್ತ ಹಳಿಗಳಾಚೆಗೆ ಮುನ್ನುಗ್ಗಿದೆ. ನಾನು ಎಷ್ಟು ಭಯಭೀತನಾಗಿದ್ದೆನೆಂದರೆ ಮುಗ್ಗರಿಸಿ ಹಳಿಗಳ ಮಧ್ಯೆ ಬಿದ್ದುಬಿಟ್ಟೆ. ಒಂದು ತರಹ

ಹೊಟ್ಟೆ ತೊಳಿಸಿದಂತಾಯಿತು. ನೆಲ ಭೂಕಂಪದಿಂದ ಕುಸಿಯುತ್ತಿದೆ ಅನ್ನಿಸಿತು. ಕೊನೆಗೂ ನನ್ನ ಸ್ವಪ್ನ ನಿಜವಾಗುತ್ತೋ? ಎನ್ನಿಸಿತು.ಇಂಜಿನ್ ಬುಸುಗುಟ್ಟಿಕೊಂಡು ಹತ್ತಿರ ಬರುತ್ತಿರುವುದು ಇನ್ನೂ ಕೇಳಿಸುತ್ತಿತ್ತು. "ಬಾರೋ ರಸ್ಟಿ, ಮೇಲೇಳು!" ದಲ್‌ಜೀತ್‌ನ ಧ್ವನಿ ನನ್ನ ಕಿವಿಯ ಹತ್ತಿರದಲ್ಲೇ ಕೇಳಿಸಿತು. ಅವನು ನನ್ನ ತೋಳನ್ನು ಹಿಡಿದು ಎಳೆಯುತ್ತಿರುವುದನ್ನು ಕಂಡು ಆಶ್ಚರ್ಯವಾಯಿತು. ಅವನು ಅಲ್ಲಿದ್ದುದರಿಂದ ನನಗೆ ಆತ್ಮವಿಶ್ವಾಸ ಬಂತು. ಹೇಗೋ ಒದ್ದಾಡಿ ಅಡ್ಡಾದಿಡ್ಡಿಯಾಗಿ ನಿಂತುಕೊಂಡು ನನ್ನ ಬೆನ್ನು ಚೀಲವನ್ನು ಸರ್ರನೆ ಎಳೆದುಕೊಂಡು ಅವನ ಜೊತೆ ಏರಿಯ ಕಡೆಗೆ ಓಡಿದೆ. ಉಬ್ಬು ತಗ್ಗಿನ ಕಬ್ಬಿಣದ ತಗಡಿನ ಬೇಲಿ ನಮ್ಮ ರಸ್ತೆಯನ್ನು ತಡೆದಿತ್ತು. ಅದು ಹತ್ತು ಅಡಿ ಎತ್ತರವಾಗಿತ್ತು. ಅದರ ಮೇಲೆ ಕಾಲಿಟ್ಟುಕೊಳ್ಳಲು ಸ್ಥಳವಿಲ್ಲದಿದ್ದ ಕಾರಣ ಹತ್ತಲಾಗುತ್ತಿರಲಿಲ್ಲ. ನಾವು ಬೇಲಿಯ ಪಕ್ಕದಲ್ಲೇ ಓಡುತ್ತಾ ಗೂಡ್ಸ್ ಯಾರ್ಡ್‌ಗೆ ಸೇರಿದಂತಿದ್ದ ತೆರೆದ ಜಾಗದವರೆಗೂ ಬಂದೆವು.

ನಾವು ಒಂದು ರಸ್ತೆಯ ತಿರುವಿನ ಕಡೆ ಮುನ್ನುಗ್ಗಿ ಪಕ್ಕದ ಸಣ್ಣ ರಸ್ತೆಗೆ ಬಂದೆವು. ಸಣ್ಣ ಗಲ್ಲಿಗಳಲ್ಲಿ ಮತ್ತು ಸಂದಿ–ಗೊಂದಿಗಳಲ್ಲಿ ಓಡುತ್ತಾ ಹೋದೆವು. ಸಣ್ಣ ಮಸೀದಿಗಳು, ದೇವಸ್ಥಾನಗಳು, ಶಾಲೆಗಳು, ಅಂಗಡಿಗಳು, ಒಂದಕ್ಕೊಂದು ಅಂಟಿಕೊಂಡಂತಿದ್ದವು. ಓಡುತ್ತಾ ಕೊನೆಗೆ ಒಂದು ಅಗಲವಾದ ರಸ್ತೆಗೆ ತಲುಪಿದೆವು. ಆ ರಸ್ತೆ ಜನಭರಿತವಾಗಿತ್ತು. ವಾಹನಗಳ ಶಬ್ದ ವಿಪರೀತವಾಗಿತ್ತು. ನಾವು ಡೆಲ್ಲಿಯ ಹೆಸರುವಾಸಿಯಾದ, ಐತಿಹಾಸಿಕ ಚಾಂದನಿ ಚೌಕದಲ್ಲಿದ್ದೆವು.



# ಚಾಂದನಿ ಚೌಕದಲ್ಲಿ ವಿನೋದ ಪ್ರಕರಣ

ಇಲ್ಲಿ ಅಂಗಡಿಯವರ ಸಂದಣಿ, ಸೈಕಲ್ ತುಳಿಯುವವರು, ಬಾಬುಗಳು, ತುಂಟ ಹುಡುಗರು, ಸಾಧುಗಳು, ಒಡವೆ ಅಂಗಡಿಯವರು, ಕ್ಷೌರಿಕರು ಮತ್ತು ಜೇಬುಗಳ್ಳರ ಗದ್ದಲದಲ್ಲಿ ನಾವು ಸಾಕಷ್ಟು ಸುರಕ್ಷಿತರಾಗಿದ್ದೇವೆನಿಸಿತು. ಕಣ್ಣು ತಪ್ಪಿಸಿಕೊಂಡು ಓಡಾಡಲು ನಗರದ ಅತಿ ಮುಖ್ಯ ಭಾಗವೇ ಯಾವತ್ತೂ ಉತ್ತಮ ಜಾಗ. ಪಲಾಯನ ಮಾಡುವವರು ಯಾವತ್ತೂ ಹಳ್ಳಿಗಾಡಿನ ಕಡೆ ಓಡಿಹೋಗುವ ತಪ್ಪು ಮಾಡಬಾರದು. ಅಪರಿಚಿತರಾದ ಕಾರಣ ಹಳ್ಳಿಗಳಲ್ಲಿ ಅವರನ್ನು ಪತ್ತೆ ಹಚ್ಚುವುದು ಅತಿ ಸುಲಭ. ಆಕಸ್ಮಿಕವಾಗಿ ನಾವು ದೆಹಲಿಯ ಅತ್ಯಂತ ಸುರಕ್ಷಿತ ಜಾಗಕ್ಕೆ ಬಂದು ಸೇರಿಕೊಂಡೆವು.

ಟಾಂಗಾಗಳು, ಎತ್ತಿನ ಗಾಡಿಗಳು, ಹೊಸದೋ ಅಥವಾ ಹಳೆಯದೋ ಸೈಕಲ್‌ಗಳು, ಸ್ಕೂಟರ್, ರೀಕ್ಷಾಗಳು ಮತ್ತು ಈಚೆಗೆ ಕಾರುಗಳು ಎಲ್ಲವೂ ರಸ್ತೆಯ ಸದುಪಯೋಗ ಪಡೆಯಲು ಹೆಣಗಾಡುತ್ತಿದ್ದವು. ಯಾವುದಕ್ಕೆ ಗಂಟೆ ಇತ್ತೋ ಅದು ಠಣ ಠಣ ಶಬ್ದ ಮಾಡುತ್ತಿತ್ತು. ಹಾರ್ನ್ ಅಥವಾ ಗಂಟೆ ಇಲ್ಲದಿದ್ದವರು ಗಂಟಲಿನಿಂದಲೇ ಸ್ವರ ಹೊರಡಿಸುತ್ತಿದ್ದರು.

ಒಂದು ಸಣ್ಣ ಮಿಠಾಯಿ ಅಂಗಡಿ ನೋಡಿದೆವು. ದಲ್‌ಜೀತ್ ಅಲ್ಲಿ ರಸಭರಿತ ಗುಲಾಬ್ ಜಾಮೂನನ್ನು ಗಂಟಲಲ್ಲಿ ಇಳಿಸುತ್ತಿದ್ದಾಗ ನಾನು ಬಂಗಾರದ ತಗಡಿನಂತೆ ಹೊಳೆಯುತ್ತಿದ್ದ ಜಿಲೇಬಿಗಳನ್ನು ತಿಂದೆ.

ಜೋರಾಗಿ ಮಳೆ ಸುರಿಯುತ್ತಿತ್ತು. ನಾವು ಒಂದು ವರಾಂಡದಲ್ಲಿ ಆಶ್ರಯ ಪಡೆಯಬೇಕಾಯಿತು. ಮಳೆ ತುಂಬ ಜೋರಾಯಿತು. ಆದ್ದರಿಂದ ರಸ್ತೆ ಬೇಗ ಖಾಲಿ ಆಯಿತು. ಜನರ ಗುಂಪು ಸಹ ಕರಗಿತು. ಒಂದೆರಡು ಕಾರುಗಳು ನುಗ್ಗುತ್ತಿದ್ದ ನೀರಿನಲ್ಲಿ ಕುಲುಕಾಡುತ್ತಾ ಹೋದವು ಮತ್ತು ಬೀದಿ ದನಗಳು ಕಸದ ರಾಶಿಯನ್ನು ಕೆದಕುತ್ತಾ ಇದ್ದವು.

ಸಣ್ಣ ಹುಡುಗರ ಒಂದು ಗುಂಪು ಗಲಾಟೆ ಮಾಡಿಕೊಂಡು ರಸ್ತೆಗೆ ಬಂತು. ರಸ್ತೆಯಲ್ಲಿ ನೀರು ಪ್ರವಾಹದಂತೆ ಹರಿಯುತ್ತಿತ್ತು. ಅವರು ಮಳೆಯಿಂದ ತುಂಬಿದ ಚರಂಡಿಯ ಬಳಿಗೆ

ಬಂದಾಗ ಕೇಕೆಹಾಕುತ್ತ ಅದರಲ್ಲಿ ಧುಮುಕಿದರು. ಒಂದು ಚೆಂಡು ಹೂವಿನ ಹಾರ ತೇಲಿಕೊಂಡು ರಸ್ತೆಯ ಮಧ್ಯಕ್ಕೆ ಬಂತು.

ನಂತರ ಇದ್ದಕ್ಕಿದ್ದಂತೆ ಮಳೆ ನಿಂತುಹೋಯಿತು. ಸೂರ್ಯ ಮೋಡದ ಮರೆಯಿಂದ ಹೊರಗೆ ಬಂದ. ನನ್ನ ಕಾಲುಗಳ ಮಧ್ಯದಿಂದ ಒಂದು ಕಾಗದದ ದೋಣಿ ತೇಲಿಕೊಂಡು ಬಂತು.

"ಎಲ್ಲಿಗೆ ಹೋಗೋಣ, ಈಗ ಸ್ಟೇಷನ್ ಅಷ್ಟೇನೂ ಸುರಕ್ಷಿತವಲ್ಲ. ಹೇಗಾದರೂ ನಾವು ಡೆಲ್ಲಿ ಬಿಡಲೇಬೇಕು. ಯಾವುದಾದರೂ ಅಗ್ಗದ ಹೋಟೆಲ್ ಹುಡುಕಿ, ಅಲ್ಲಿ ರಾತ್ರಿ ಕಳೆಯೋಣ".

"ಓಹೋ, ನನ್ನ ಹತ್ತಿರ ಇನ್ನೂ ಮೂವತ್ತು ರೂಪಾಯಿ ಇದೆ". ದಲ್‌ಜೀತ್ ಹೇಳಿದ.

ನನ್ನ ಬಳಿ ಇರೋ ಹತ್ತು ರೂಪಾಯಿ ಸೇರಿಸಿದರೂ, ನಮ್ಮಿಬ್ಬರಿಗೆ ಅಷ್ಟು ಸಾಕಾಗೊಲ್ಲ ಎಂದು ನನಗನ್ನಿಸುತ್ತೆ. ಟಿಕೆಟ್ ತೆಗೆದುಕೊಂಡರಂತೂ ಸಾಧ್ಯವೇ ಇಲ್ಲ. ಹಾಗಾದರೆ ನಾವು ಟಿಕೆಟ್ ತೆಗೆದುಕೊಳ್ಳುವುದು ಬೇಡವೇ ಬೇಡ", ದಲ್‌ಜೀತ್ ಹೇಳಿದ.

ಒಂದು ಹೋಟೆಲ್ ಹುಡುಕುವುದಕ್ಕೆ ನಮಗೇನು ಬಹಳ ಹೊತ್ತು ಹಿಡಿಯಲಿಲ್ಲ. ಅದನ್ನು ಗ್ರೇಟ್ ಓರಿಯಂಟಲ್ ಹೋಟಲ್ ಎಂದು ಕರೆಯುತ್ತಿದ್ದರು. ಅದು ಪೋಲಿಸ್ ಠಾಣೆಯ ಹಿಂದುಗಡೆಯೇ ಇತ್ತು. ಅದು ಮೂರನೆ ದರ್ಜೆ ಹೋಟಲ್‌ನಂತೆ ಕಾಣಿಸುತ್ತಿರಲಿಲ್ಲ. ಐದು ರೂಪಾಯಿಗೆ ನಮಗೊಂದು ಹಿಂದುಗಡೆ ಕೋಣೆ ಸಿಕ್ಕಿತು. ಅದರ ಕಿಟಕಿಯಿಂದ ಒಬ್ಬ ಆಫಘನ್ ಮಸಾಲೆ ವ್ಯಾಪಾರಿಯ ಗೋದಾಮು ಕಾಣಿಸುತ್ತಿತ್ತು. ಕೆಳಗಿನ ಅಂಗಳದಿಂದ ಹಿಂಗಿನ ಪ್ರಬಲವಾದ ವಾಸನೆ ಬರುತ್ತಿತ್ತು. ನಾವು ಸುಸ್ತಾಗಿದ್ದೆವು, ಸೆಖೆಯಿಂದ ತಳಮಳಿಸುತ್ತಿದ್ದೆವು. ನಮ್ಮ ಸಾಮಾನುಗಳನ್ನು ನೆಲದ ಮೇಲೆ ಎಸೆದು ಒಬ್ಬರಾದ ಮೇಲೆ ಒಬ್ಬರು ಬಚ್ಚಲುಮನೆ ನಲ್ಲಿ ಕಡೆ ಹೋದೆವು. ನಂತರ ಒಂದು ಮಂಚದ ಮೇಲೆ ಮೈ ಚಾಚಿ, ಬೀದಿಯಲ್ಲಿನ ಗಲಾಟೆ, ಹೋಟೆಲ್‌ನ ಹಾಸಿಗೆ ಮೇಲಿನ ಕ್ರಿಮಿ ಕೀಟಗಳ ಸಮೂಹ, ತಲೆಮೇಲೆ ಕರ ಕರ ಎಂದು ತಿರುಗುವ ಫ್ಯಾನ್ ಎಲ್ಲವನ್ನೂ ಮರೆತು, ಇಡೀ ಮಧ್ಯಾಹ್ನ ನಿದ್ರೆಮಾಡಿದೆವು.

ನಾವು ಎಚ್ಚರಗೊಂಡಾಗ ಸಂಜೆಗತ್ತಲಾಗಿತ್ತು. ನಮಗೆ ಪುನಃ ಹಸಿವಾಗಿತ್ತು. ದಲ್‌ಜೀತ್ ಬಾಗಿಲು ತೆಗೆದು ಕೂಗಿದ. ಬೇಗನೆ ಒಬ್ಬ ಕೆಲಸದ ಹುಡುಗ ಪ್ರತ್ಯಕ್ಷನಾದ.

"ಚಹ, ಟೋಸ್ಟ್. ಎರಡು ದೊಡ್ಡ ಆಮ್ಲೆಟ್‌ಗಳು ಮತ್ತು ಒಂದು ಶೀಶೆ ಟೊಮ್ಯಾಟೋ ಚಟ್ನಿ ತೆಗೆದುಕೊಂಡು ಬಾ", ದಲ್‌ಜೀತ್ ಆಜ್ಞಾಪಿಸಿದ.

ಇಪ್ಪತ್ತು ನಿಮಿಷಗಳ ನಂತರ ಬಂದ ಆಮ್ಲೆಟ್‌ಗಳು ಬಹಳ ಚಿಕ್ಕದಾಗಿದ್ದವು. ಎರಡನ್ನೂ ಒಂದೇ ಮೊಟ್ಟೆಯಿಂದ ಮಾಡಿರುವಂತೆ ಕಾಣಿಸುತ್ತಿತ್ತು. ಚಟ್ನಿಗೆ ನೀರು ಬೆರೆಸಿ ತೆಳ್ಳಗೆ ಮಾಡಲಾಗಿತ್ತು. ಟೋಸ್ಟ್ ಕರ್ರಗಾಗಿದ್ದವು. ಉಪ್ಪು ಒದ್ದೆಯಾಗಿತ್ತು. ನಾವು ಉಪ್ಪು ಹಾಕಿಕೊಳ್ಳಲು ಉಪ್ಪಿನ ಭರಣಿಯನ್ನು ಅಮುಕಿ ತೆಗೆಯಬೇಕಾಗಿತ್ತು. ಮೆಣಸುಪುಡಿಯನ್ನು ಮಾತ್ರ ಧಾರಾಳವಾಗಿ ಉದುರಿಸಿಕೊಂಡೆವು. ನಮಗಿನ್ನೂ

ಹೊಟ್ಟೆ ತುಂಬಿರಲಿಲ್ಲ. ಪುನಃ ಮೊಟ್ಟೆಗಳನ್ನು ತರಲು ಹೇಳಿದೆವು. ಈ ಸಾರಿ ಬೇಯಿಸಿದ ಮೊಟ್ಟೆಗಳನ್ನು ತರಿಸಿದೆವು. ಅವು ಎಷ್ಟೇ ಸಣ್ಣಗಿದ್ದರೂ ಪೂರ್ತಿ ಅಂತೂ ಇರುತ್ತಲ್ಲ.

"ಹೊರಗೆ ಹೋಗೋಣ ಇಲ್ಲಿ ಉಸಿರುಕಟ್ಟುತ್ತಿದೆ".

"ನನಗಿನ್ನೂ ನಿದ್ದೆ ಬರುತ್ತಿದೆ" ನಾನೆಂದೆ.

"ಹಾಗಾದರೆ ನಾನು ಸ್ವಲ್ಪ ಹೊತ್ತು ಹೊರಗೆ ಹೋಗಿ ಬರುತ್ತೇನೆ. ನಾನು ಗುರುದ್ವಾರಕ್ಕೆ ಹೋದರೂ ಹೋಗಬಹುದು".

"ಒಳ್ಳೇದು. ಆದರೆ ಎಲ್ಲಾದರೂ ಹೊರಟು ಹೋಗಿಬಿಟ್ಟೇಯಾ".

ದಲ್‌ಜೀತ್ ನನ್ನನ್ನು ಬಿಟ್ಟು ಹೋದ. ನಾನು ಮಂಚದ ಮೇಲೆ ಪುನಃ ಮಲಗಿ ಟ್ಯಾಗೋರ್ ಅವರ ದಿ ಗಾರ್ಡನರ್ ಅನ್ನು ತೆರೆದೆ. ಆದರೆ ನಾನು ಅದನ್ನು ಜಾಸ್ತಿ ಹೊತ್ತು ಓದಲಿಲ್ಲ. ಏಕೆಂದರೆ ಸಂಜೆಗತ್ತಲು ಕವಿಯುತ್ತಿದ್ದ ತಂಪಿನ ರಾತ್ರಿಯ ಸ್ವಚ್ಛಂದತೆಯನ್ನು ಅಪಹರಿಸುವ ಕೀಟಗಳ ಕಾಟ ಆರಂಭವಾಯಿತು. ಬೇಸಿಗೆಯ ನಿದ್ರೆಯಲ್ಲಿದ್ದ ಗೆದ್ದಲು ಹುಳುಗಳೂ ತಮ್ಮ ಗೂಡುಗಳಿಂದ ಹೊರ ಬಂದವು. ಪ್ರತಿಯೊಂದು ಬಿಲ ಹಾಗೂ ಬಿರುಕಿನಿಂದ ದೊಡ್ಡ ರೆಕ್ಕೆಯ ಈಚಲು ಹುಳುಗಳು ಹೊರಬಂದವು. ತಮ್ಮ ಜೀವನದ ಮೊದಲ ಹಾಗೂ ಕಡೆಯ ಹಾರಾಟಕ್ಕೆ ಸಿದ್ಧಗೊಳ್ಳುವ ರೀತಿಯಲ್ಲಿ ಅವು ರೆಕ್ಕೆಗಳನ್ನು ಜೋರಾಗಿ ಪಟಪಟನೆ ಬಡಿದವು. ಅವುಗಳು ಒಂದೇ ಒಂದು ದಿಕ್ಕಿನಲ್ಲಿ ಹಾರುತ್ತಿದ್ದವು. ಬೆಳಕಿನ ಕಡೆಗೆ – ವಿದ್ಯುದ್ದೀಪಗಳ, ಬೀದಿ ದೀಪಗಳ, ಮತ್ತು ಸೀಮೆಎಣ್ಣೆ ಲಾಂದ್ರಗಳ, ಕಡೆಗೆ ಪೂರ್ತಿ ಊರಲ್ಲೆಲ್ಲಾ ಹಾರುತ್ತಿದ್ದವು. ನಮ್ಮ ಕೋಣೆಯ ಕೆಳಗಿದ್ದ ಬೀದಿ ದೀಪಗಳು ಗೆದ್ದಲು ಹುಳುಗಳ ದೊಡ್ಡ ಸಮೂಹವನ್ನೇ ಆಕರ್ಷಿಸಿದ್ದವು. ಹಲ್ಲಿಗಳಿಗೂ ಅಡ್ಡಾಡುವ ಸಮಯವಾಗಿತ್ತು. ಅವುಗಳಿಗೆ ಅನೇಕ ವಾರಗಳಿಂದ ಸಹನೆಯಿಂದ ಕಾಯುತ್ತಿದ್ದುದರ ಫಲ ದೊರಕಿತ್ತು. ಅವು ತಮ್ಮ ಕೆಂಪು ಬಣ್ಣದ ಅಂಟು ನಾಲಿಗೆಯನ್ನು ಚಾಚುವುದನ್ನು ನೋಡಿದಾಗ, ನಿಧಾನವಾಗಿ ಸುತ್ತುವ ಒಂದು ಲೋಕವೇ ಸೃಷ್ಟಿಯಾಗಿದೆಯೋ ಎನ್ನುವ ಕಲ್ಪನೆ ಬರುತ್ತಿತ್ತು. ಅವು ಹುಳುಗಳನ್ನು ಪಕ್ಕನೆ ಹಿಡಿದು ಕಬಳಿಸುತ್ತಿದ್ದವು. ಪ್ರಾಯಶಃ ಇಂತಹ ರಸದೂಟ ಮುಂದಿನ ಋತುವಿನವರೆಗೂ ದೊರೆಯುವುದೋ ಇಲ್ಲವೋ ಎಂಬ ಅನುಮಾನದಿಂದ ಅವು ಗಂಟೆಗಟ್ಟಲೆ ಹುಪ್ಪಟೆಗಳನ್ನು ತಿಂದು ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದವು. ಬೇಸಿಗೆ ಕಾಲ ಪೂರ್ತಿ ರೆಕ್ಕೆ ಹುಳಗಳ ದೊಡ್ಡ ಸಮೂಹ, ಕತ್ತಲಿನಿಂದ ಬೆಳಕಿಗೆ ಹಾರುವ ಸಲುವಾಗಿ ತಯಾರು ಮಾಡಿಕೊಳ್ಳುತ್ತವೆ. ಆದರೆ ಒಂದೇ ಒಂದೂ ಸಹ ತಮ್ಮ ಸಲುವಾಗಿ ಜೀವ ಒತ್ತೆ ಇಟ್ಟು ಬದುಕುಳಿಯವುದಿಲ್ಲ.

ಅರೆ ನಿದ್ದೆಯಲ್ಲಿದ್ದ ನಾನು ಕಣ್ಮುಚ್ಚಿಕೊಂಡೆ. ಆದರೆ ಪಟ್ಟಣದಲ್ಲಿ ಸತತವಾಗಿ ಸಂಚರಿಸುತ್ತಿದ್ದ ವಾಹನಗಳ ಶಬ್ದ ಕಿಟಕಿಯನ್ನು ಭೇದಿಸಿಕೊಂಡು ಬರುತ್ತಿತ್ತು. ಹಡಗುಗಳು ಮತ್ತು ಬಂದರುಗಳು ನಮ್ಮಿಂದ ಎಷ್ಟೋ ದೂರದಲ್ಲಿರುವಂತೆ ನನಗೆ ಕಂಡುಬಂತು. ಅದೇರೀತಿ ಬೆಟ್ಟಗಳು ಮತ್ತು ಪರ್ವತದ ತೊರೆಗಳು.

ನಾನು ಗಾಢ ನಿದ್ರೆಯಲ್ಲಿದ್ದೆ. ದಲ್‌ಜೀತ್ ವಾಪಸ್ ಬಂದ ನಂತರ ನನಗೆ ಎಚ್ಚರವಾಯಿತು. "ನಮ್ಮ ಸಮಸ್ಯೆಗೆ ಪರಿಹಾರ ಕಂಡುಕೊಂಡು ಬಂದಿದ್ದೇನೆ", ಅವನು ಸಂತೋಷದಿಂದ ಮಂದಹಾಸ ಬೀರುತ್ತಾ ಹೇಳಿದ. "ನಾವು ರೈಲಿನ ಬಗ್ಗೆ ಚಿಂತಿಸುವುದು ಬೇಡ. ನಾನು ಒಬ್ಬ ಟ್ರಕ್ ಚಾಲಕನ ಸ್ನೇಹ ಗಳಿಸಿದ್ದೇನೆ. ಅವನು ನಮ್ಮನ್ನು ಜಯಪುರದವರೆಗೂ ಕರೆದುಕೊಂಡು ಹೋಗಲು ಒಪ್ಪಿದ. ಅದು ಸುಮಾರು ಮುನ್ನೂರು ಮೈಲಿ ಇದೆ. ಜಯಪುರದಿಂದ ಗಾಡಿ ಹಿಡಿಯುವುದು ಹೆಚ್ಚು ಸುರಕ್ಷಿತ. ನಿನ್ನ ಸ್ನೇಹಿತ ಯಾವಾಗ ನಮ್ಮನ್ನು ಕರೆದುಕೊಂಡು ಹೋಗುತ್ತಾನೆ?"

"ಬೆಳಗಿನಜಾವ ನಾಲ್ಕು ಘಂಟೆಗೆ ಈ ಜಾಗದಿಂದ ಹೊರಡುತ್ತದೆ".

"ಪಾಪಿಗಳಿಗೆ ವಿರಾಮಕ್ಕೆ ಎಡೆಯಿಲ್ಲ. ನಾವು ಎಷ್ಟು ಬೇಗ ಹೊರಟರೆ ಅಷ್ಟೂ ಒಳ್ಳೆಯದು. ಇವತ್ತು ಬುಧವಾರ ಮತ್ತು ನನ್ನ ಚಿಕ್ಕಪ್ಪನ ಹಡಗು ಶನಿವಾರ ಹೊರಡಬಹುದು". "ನಾವು ಎಷ್ಟು ಹಣ ಕೊಡಬೇಕಾಗುತ್ತೆ?"

"ಒಂದು ಕಾಸೂ ಕೊಡಬೇಕಾಗಿಲ್ಲ. ಬಿಟ್ಟಿ ಪ್ರಯಾಣ. ಟ್ರಕ್ ಡ್ರೈವರ್ ಒಬ್ಬ ಸಿಖ್. ನನ್ನ ಭಾವ ಅವನ ಅತ್ತಿಗೆಯ ಸೋದರ ಸೊಸೆಯನ್ನು ಮದುವೆಯಾಗಿರುವುದರಿಂದ ನಾವು ಒಬ್ಬರಿಗೊಬ್ಬರು ಸಂಬಂಧಿಗಳೆಂದು ಹೇಳಿ, ಅವನನ್ನು ಒಲಿಸಿಕೊಂಡೆ" ಎಂದ ದಲ್‌ಜೀತ್.



# ರಸ್ತೆಯಲ್ಲಿ ಮಮ್ಮಾಳ ಜೊತೆ

ಮರುದಿನ ಮುಂಜಾನೆ ನಾಲ್ಕು ಘಂಟೆ ಹೊತ್ತಿಗೆ ನಾವು ಕೆಂಪುಕೋಟೆ ಕಡೆಗೆ ಹೊರಟೆವು. ನಕ್ಷತ್ರಮಯ ಅಕಾಶದ ಹಿನ್ನೆಲೆಯಲ್ಲಿ ಕಪ್ಪು ಪ್ರಾಕಾರ ಎದ್ದು ನಿಂತಿತ್ತು. ಹಿಂದಿನ ದಿನ ಅಷ್ಟೊಂದು ಜನಭರಿತವಾಗಿದ್ದ ರಸ್ತೆಗಳು ಈಗ ಮರುಭೂಮಿಯಂತೆ ನಿರ್ಜನವಾಗಿದ್ದವು. ರಸ್ತೆಯ ದೀಪಗಳು ರಸ್ತೆ ಪಕ್ಕದ ಕಾಲುದಾರಿಯ ಮೇಲೆ ಬೆಳಕು ಚೆಲ್ಲಿದ್ದವು. ಎಲ್ಲೋ ಒಂದೊಂದು ಕಾರು ನಿಶ್ಶಬ್ದವಾಗಿ ಚಲಿಸುತ್ತಿದ್ದುವು. ಇದೆಲ್ಲಾ ಒಂದು ಬೇರೆಯೇ ಪ್ರಪಂಚವೆನ್ನುವಂತೆ ಭಾಸವಾಗುತ್ತಿತ್ತು.

ಕೆಂಪು ಕೋಟೆಯ ಹತ್ತಿರ ಇನ್ನೂ ತೆರೆದಿದ್ದ ಒಂದೆರಡು ಧಾಬಾಗಳನ್ನು ನಾವು ಕಂಡೆವು. ದಿನವೆಲ್ಲಾ ನಿದ್ರೆಮಾಡಿ, ರಾತ್ರಿ ವಾಹನವನ್ನು ನಡೆಸುವಂತಹ ಟ್ರಕ್ ಚಾಲಕರು ಈ ಧಾಬಾಗಳಿಗೆ ಹೋಗುತ್ತಿದ್ದರು.

ನಮ್ಮ ಟ್ರಕ್ ಚಾಲಕ ಎತ್ತರವಾಗಿದ್ದ, ಗಡ್ಡದ ಸಿಖ್, ಕತ್ತಲೆಯಿಂದಾಗಿ ನಮಗೆ ಅಸ್ಪಷ್ಟವಾಗಿ ಕಾಣಿಸುತ್ತಿದ್ದ. ಅವನ ಜೊತೆ ಅವನ ಸಂಗಾತಿ ಒಬ್ಬನಿದ್ದ. ಅವನೂ ಸಿಖ್. ಅವನಿನ್ನೂ ಒಳ ಚಡ್ಡಿಯನ್ನೇ ಧರಿಸಿದ್ದ.

''ನೀವು ಹಿಂದುಗಡೆ ಹತ್ತಿ ಕುಳಿತುಕೊಳ್ಳಿ ಹೋಗಿ'', ಚಾಲಕ ತನ್ನ ಪಕ್ಕಾ ಪಂಜಾಬಿಯಲ್ಲಿ ನಮಗೆ ಹೇಳಿದ. ನಾನು ಅದನ್ನು ಸಾಕಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲವನಾಗಿದ್ದೆ. ನಾವು ಇನ್ನು ಕೆಲವೇ ನಿಮಿಷಗಳಲ್ಲಿ ಹೊರಡೋಣ ಎಂದ. ಟ್ರಕ್ಕನ್ನು ಆಲದ ಮರದ ಕೆಳಗೆ ನಿಲ್ಲಿಸಲಾಗಿತ್ತು. ನಾವು ಹಿಂದಿನಿಂದ ಟ್ರಕ್ ಒಳಗೆ ಹೋದೆವು. ಆದರೆ ನಾವಲ್ಲಿ ಕಂಡದ್ದು, ಅಡ್ಡಲಾಗಿ ಬಿದ್ದುಕೊಂಡಿದ್ದ ಪ್ರಾಗೈತಿಹಾಸಿಕ ಪೆಡಂಭೂತ. ಅದು ಒಂದು ಸಾರಿ ಬುಸುಗುಟ್ಟುತ್ತಾ ಹಲಗೆ ಮೇಲೆ ಬಲವಾಗಿ ಅದುಮುತ್ತಾ ನಮ್ಮನ್ನು ಹಿಂದಕ್ಕೆ ಉರುಳಿಸಿತು.

''ಭಯ್ಯಾಜೀ'' ದಲ್‌ಜೀತ್ ಚಾಲಕನತ್ತ ಕಿರುಚುತ್ತಾ ಹೇಳಿದ.

''ಇಲ್ಲಿ ವಿಚಿತ್ರ ಪ್ರಾಣಿ ಇದೆ!''

"ಏನೂ ಭಯಪಡಬೇಡಿ, ಅವಳ ಹೆಸರು ಮಮ್ತಾ" ಎಂದ. "ನಮ್ಮ ಗೆಳತಿ".

"ಆದರೆ ಅದು ಇಲ್ಲೇನು ಮಾಡುತ್ತಿದೆ?"

"ಅವಳೂ ನಮ್ಮ ಜೊತೆ ಪ್ರಯಾಣ ಮಾಡುತ್ತಾಳೆ. ನಾನು ಅವಳನ್ನು ಜಯಪುರದ ಮಂಡಿಗೆ ಕರೆದುಕೊಂಡು ಹೋಗುತ್ತಿದ್ದೇನೆ. ಆದ್ದರಿಂದ ಅವಳ ಜೊತೆ ಹೊಂದಿಕೊಂಡು ನಿಮ್ಮ ಪಾಡಿಗೆ ನೀವು ಆರಾಮವಾಗಿರಿ" ಎಂದ ಟ್ರಕ್ ಚಾಲಕ. ಅಷ್ಟು ಹೊತ್ತಿಗೆ ಸಾಕಷ್ಟು ಬೆಳಕಾಯಿತು. ನಮ್ಮೊಡನೆ ಪ್ರಯಾಣ ಮಾಡುತ್ತಿರುವ ಜೊತೆಗಾತಿಯನ್ನು ಸರಿಯಾಗಿ ನೋಡಲು ಅವಕಾಶವಾಯಿತು. ಅದು ಚೆನ್ನಾಗಿ ಬೆಳೆದು ಮೈತುಂಬಿಕೊಂಡಿದ್ದ ಪಂಜಾಬಿನ ಎಮ್ಮೆ. "ಇದೊಂದು ಶ್ರೇಷ್ಠ ಜಾತಿಯ ಎಮ್ಮೆ", ದಲ್‌ಜೀತ್ ಹೇಳಿದ. ಪ್ರಾಣಿಗಳ ಲಕ್ಷಣದ ಬಗ್ಗೆ ಸಾಕಷ್ಟು ಅನುಭವ ಅವನಿಗಿತ್ತು ಎಂದು ತೋರುತ್ತದೆ. "ಆದರ ನೀಲಿ ಕಣ್ಣುಗಳನ್ನು ನೋಡು!" ಎಂದ ದಲ್‌ಜೀತ್. "ಎಮ್ಮೆಗಳಿಗೆ ನೀಲಿ ಕಣ್ಣುಗಳಿರುತ್ತವೆಂದು ನನಗೆ ಗೊತ್ತಿರಲಿಲ್ಲ" ನಾನೆಂದೆ.

"ಇಂತಹ ಕಣ್ಣುಗಳು ಒಳ್ಳೆ ಜಾತಿಯ ಎಮ್ಮೆಗಳಿಗೆ ಮಾತ್ರ ಇರುತ್ತವೆ", ದಲ್‌ಜೀತ್ ಅಂದ. "ನೀಲಿ ಕಣ್ಣಿನವು ಕಂದು ಬಣ್ಣದ ಕಣ್ಣುಗಳಿರುವ ಎಮ್ಮೆಗಳಿಗಿಂತ ಹೆಚ್ಚು ಹಾಲು ಕೊಡುತ್ತವೆ".

ನಮ್ಮ ಅದೃಷ್ಟವೇನೋ ಎನ್ನುವಂತೆ ಸರ್‌ದಾರ್‌ಜಿ ಟ್ರಕ್ ನಡೆಸಲು ಶುರುಮಾಡಿದ. ನದಿಯ ಮೇಲಿಂದ ಬೀಸಿದ ಮುಂಜಾವಿನ ತಂಗಾಳಿ ಎಮ್ಮೆಯ ವಾಸನೆಯನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡಿತ್ತು. ಅತಿ ಬೇಗನೆ ನಾವು ಡೆಲ್ಲಿಯನ್ನು ದಾಟಿದೆವು. ತುಂಬಾ ವೇಗದಲ್ಲಿ ನಮ್ಮ ಟ್ರಕ್ ಜಯಪುರದ ರಸ್ತೆಯಲ್ಲಿ ಹೋಗುತ್ತಿತ್ತು. ತಗ್ಗು ಪ್ರದೇಶಗಳಲ್ಲಿ ನೀರು ನಿಂತಿತ್ತು.

ರಾಜಾಸ್ಥಾನದತ್ತ ನಮ್ಮ ಪ್ರಯಾಣ ಮುಂದುವರಿದಂತೆ ಕ್ರೌಂಚ ಪಕ್ಷಿಗಳು, ಕೊಕ್ಕರೆಗಳು ಮತ್ತು ಉದ್ದನೆಯ ಕೊಕ್ಕಿನ ಹಕ್ಕಿಗಳನ್ನು ನಾವು ಅಧಿಕ ಸಂಖ್ಯೆಯಲ್ಲಿ ಕಂಡೆವು. ಹೊಲಗಳು ಮತ್ತು ಮರಗಳು ಅಪರೂಪದ ಸುಂದರ ಹಕ್ಕಿಗಳಿಂದ ಜೀವಂತವಾಗಿದ್ದವು. ಉದ್ದನೆ ಬಾಲದ ಕಾಕರಾಜ, ನೀಲಕಂಠಪಕ್ಷಿ ಮತ್ತು ಗೀಜಗನ ಹಕ್ಕಿ, ವಿಷ್ಣುವಿನ ಪ್ರಸಿದ್ಧ ವಾಹನವೆಂದು ಹೇಳಲಾಗುವ ಬಿಳಿ ತಲೆಯ ಹದ್ದು ಗರುಡ ಇವೆಲ್ಲವನ್ನೂ ನಾವು ನೋಡಿದೆವು.

ಇನ್ನೂ ಮುಂದೆ ಸಾಗುತ್ತಾ ರಾಜಾಸ್ಥಾನದ ಹತ್ತಿರ ಬಂದಾಗ ನವಿಲುಗಳು ಹೆಚ್ಚಾಗಿದ್ದವು. ಅಂತೆಯೇ ಒಂಟೆಗಳು ನೇರವಾಗಿ ರಸ್ತೆಯ ಪಕ್ಕದಲ್ಲಿ ಸಾಲಾಗಿ ಹೋಗುತ್ತಿದ್ದವು. ಗಿಡ ಮರಗಳು ಕಮ್ಮಿಯಾಗುತ್ತಿದ್ದಂತೆ ಮರುಭೂಮಿ ಕಾಣಬಂದಿತು. ಅಲ್ಲಿನ ಭೂಪ್ರದೇಶದಲ್ಲಿ ಕಂಡುಬರದ ಬಣ್ಣದ ಕೊರತೆಯನ್ನು ನೀಗಿಸುವುದಕ್ಕೋ ಎನ್ನುವಂತೆ ಜನರೇ ಬಣ್ಣ ಬಣ್ಣವಾಗಿ ಕಂಡರು. ಹೆಂಗಸರು ಅಗಲವಾದ ಕೆಂಪು ಲಂಗಗಳನ್ನು ಹಾಕಿಕೊಂಡಿದ್ದರು. ಅವರು ಸುಂದರವಾಗಿಯೂ, ಎತ್ತರವಾಗಿಯೂ ಬೆಳ್ಳಗೆ ಗಟ್ಟಿಮುಟ್ಟಾಗಿದ್ದರು. ಗಂಡಸರೂ ಎತ್ತರವಾಗಿದ್ದರು ಮತ್ತು ಅವರಲ್ಲಿ ಮುದುಕರಿಗೆ ಉದ್ದಕ್ಕೆ ಇಳಿಬಿಟ್ಟ ಬಿಳಿ ಗಡ್ಡವಿತ್ತು.

ಆಕಾಶದಲ್ಲಿ ಸೂರ್ಯ ಮೇಲೇರುತ್ತಿದ್ದ. ರಸ್ತೆಯಲ್ಲಿ ವಾಹನಗಳು ಹೆಚ್ಚಾದವು. ಆದರೂ ನಮ್ಮ ಟ್ರಕ್ ಡ್ರೈವರ್ ವಾಹನವನ್ನು ಅತಿ ಹೆಚ್ಚು ವೇಗದಲ್ಲೇ ನಡೆಸುತ್ತಿದ್ದ. ಪ್ರಾಯಶಃ ಅವನು ಎಮ್ಮೆಯನ್ನು ಮಾರುವ ಅವಸರದಲ್ಲಿದ್ದಂತೆ ಕಾಣಿಸುತ್ತಿತ್ತು. ಅಲ್ಲದೆ ಅವನು ಆದಷ್ಟು ಬೇಗ ಇನ್ನೊಂದು ಟ್ರಕ್ಕನ್ನು ಹಿಂದೆ ಹಾಕಲು ಪ್ರಯತ್ನಿಸುತ್ತಿದ್ದ.

ಮುಂದಿನ ಟ್ರಕ್ ಕೂಡ ವೇಗವಾಗಿಯೇ ಓಡುತ್ತಿತ್ತು; ಅದರ ಚಾಲಕ ದಾರಿಯ ಮಧ್ಯಭಾಗನ್ನು ನಮ್ಮ ಟ್ರಕ್ಕಿಗೆ ಬಿಟ್ಟುಕೊಡುವಂತೆ ಕಾಣಿಸುತ್ತಿರಲಿಲ್ಲ. ಅದರಲ್ಲಿ ಮೇಲಿನವರೆಗೂ ಕಬ್ಬನ್ನು ಪೇರಿಸಲಾಗಿತ್ತು.

"ಇದೊಂದು ಪಂದ್ಯ ಅನ್ನಿಸುತ್ತೆ!" ದಲ್‌ಜೀತ್ ಹೇಳಿದ. ಇನ್ನೂ ಚೆನ್ನಾಗಿ ಕಾಣಿಸಲೆಂದು ಅವನು ಎಮ್ಮೆಗೆ ಒರಗಿಕೊಂಡು ನಿಂತಿದ್ದ.

ಏಕ ಕಾಲದಲ್ಲಿ ಎರಡು ದೊಡ್ಡವಾಹನಗಳು ಆ ರಸ್ತೆಯಲ್ಲಿ ಸಂಚರಿಸುವಷ್ಟು ಅಗಲವಾಗಿರಲಿಲ್ಲ. ಇನ್ನೊಂದು ಟ್ರಕ್ ದಾರಿ ಬಿಟ್ಟುಕೊಡುತ್ತಿರಲಿಲ್ಲವಾದ ಕಾರಣ ನಮ್ಮ ಟ್ರಕ್ ಧೂಳಿನಿಂದ ತುಂಬಿದ್ದ ಎತ್ತಿನ ಗಾಡಿ ರಸ್ತೆಗೆ ಹೋಗಬೇಕಾಗಿತ್ತು.

ಟ್ರಕ್ಕಿನ ಹಿಂದೆ ಭಾರಿ ಧೂಳೆದ್ದು ನಮಗೆ ಉಸಿರುಕಟ್ಟುವಂತಾಯಿತು. ಟ್ರಕ್ ತಗ್ಗುದಿಣ್ಣೆಗಳ ಒರಟು ರಸ್ತೆಯಲ್ಲಿ ಓಲಾಡಿದಾಗ ನಾವುಗಳು ಟ್ರಕ್‌ನ ಫ್ಲೋರ್ ಬೋರ್ಡ್‌ನ ಮೇಲೆ ಒಗೆಯಲ್ಪಟ್ಟೆವು. ಮಮ್ತಾ ಬಹಳ ಗಾಬರಿಗೊಂಡು ನಮ್ಮನ್ನು ಚೆನ್ನಾಗಿ ತುಳಿದು ಬಿಟ್ಟಿತು. ನಂತರ ಒಂದು ಭಯಂಕರವಾದ ಎಸೆತ, ಬ್ರೇಕ್‌ಗಳ ಮಸೆತ ಎಲ್ಲದರ ಪರಿಣಾಮದಿಂದ ನಾವು ನಿಂತುಬಿಟ್ಟೆವು. ಧೂಳು ಸಂಪೂರ್ಣವಾಗಿ ಹೋದ ನಂತರ ನಮ್ಮ ಗಡ್ಡದ ಚಾಲಕ ಆತಂಕದಿಂದ ನಮ್ಮನ್ನೇ ದಿಟ್ಟಿಸಿ ನೋಡುತ್ತಿದ್ದ. "ನೀವು ಸರಿಯಾಗಿದ್ದೀರಾ ತಾನೇ?" ಅವನು ಸ್ವಲ್ಪ ಸಿಡುಕಿನಿಂದಲೇ ಕೇಳಿದ.

"ಸರಿಯಾಗಿಯೇ ಇದ್ದೇವೆ" ನಾವೆಂದೆವು.

"ಇನ್ನೊಂದು ಟ್ರಕ್ ಹಿಂದೆ ಹಾಕಿ ಹೋದೆಯಲ್ಲವೇ?" ದಲ್‌ಜೀತ್ ಕೇಳಿದ.

"ಇಲ್ಲ ಅವನೇಕೆ ದಾರಿ ಬಿಟ್ಟು ಕೊಡುತ್ತಾನೆ ಅವನೂ ನನ್ನ ಹಾಗೆಯೇ ಒಬ್ಬ ಸಿಖ್. ನೀವು ಮುಂದಕ್ಕೆ ಬಂದರೆ ವಾಸಿ." ಎಂದ ಟ್ರಕ್ ಡ್ರೈವರ್.

ನಾವು ಯಾವುದೇ ಸಂಕೋಚವಿಲ್ಲದೆ ಒಪ್ಪಿಕೊಂಡೆವು. ಅವನ ಸಹಾಯಕ ಗೊಣಗುತ್ತಾ ಎಮ್ಮೆಯ ಜೊತೆಗೆ ಹೋದ.

ಕೆಲವು ಮೈಲಿಗಳು ಹೋದ ನಂತರ, ಚಾಲಕ ನಮ್ಮೊಡನೆ ತುಂಬ ಸ್ನೇಹದಿಂದ ವರ್ತಿಸಿ ತನ್ನ ಹೆಸರು ಗುರುನಾಮ್ ಸಿಂಗ್ ಎಂದು ಹೇಳಿದ.

"ನೀವುಗಳು ನನ್ನ ಹೊಸ ಹಾರ್ನ್ ಕೇಳಬಯಸುವಿರಾ?" ಅವನು ಪಂಜಾಬಿಯಲ್ಲಿ ಕೇಳಿದ.

"ನಾವಿಷ್ಟು ಹೊತ್ತೂ ಕೇಳುತ್ತಾ ಬಂದಿಲ್ಲವೇ?" ನಾನು ಹಿಂದಿಯಲ್ಲಿ ಹೇಳಿದೆ. ಅವನೊಡನೆ ನಾವು ಚೆನ್ನಾಗಿ ಹೊಂದಿಕೊಂಡಿದ್ದೆವು. "ಹಿಂದುಗಡೆ ಹಾರನ್ ಶಬ್ದ ನಿಮಗೆ ಚೆನ್ನಾಗಿ ಕೇಳಿಸೋದಿಲ್ಲ. ಅದಕ್ಕೋಸ್ಕರವೇ ನಾನು ನಿಮ್ಮನ್ನು ಮುಂದಕ್ಕೆ ಕರೆದದ್ದು".

"ಈ ಹಾರನ್ ಬಗ್ಗೆ ನಿಮಗೆ ಏನನ್ನಿಸುತ್ತೆ?" ಅವನು ಕೇಳಿದ. ಆಗ ಕಿವಿಗಡಚಿಕ್ಕುವಂತಹ ಶಬ್ದ ಟ್ರಕ್ಕಿನ ಡ್ರೈವರನ ಕ್ಯಾಬಿನ್‌ನಲ್ಲಿ ತುಂಬಿತು.

"ಈ ಹಾರ್ನ್ ತುಂಬ ಚೆನ್ನಾಗಿದೆ", ನನ್ನ ಕಿವಿಯೊಳಗೆ ಬೆಟ್ಟು ತೂರಿಸುತ್ತಾ ನಾನೆಂದೆ, "ಇದಕ್ಕಿಂತ ಜಾಸ್ತಿ ಶಬ್ದ ಬರಲಿಕ್ಕೆ ಸಾಧ್ಯವೇ ಇಲ್ಲ".

"ನೀನು ಈ ಹಾರನ್ ಶಬ್ದವನ್ನು ಅರ್ಧಮೈಲಿ ದೂರದ ತನಕ ಕೇಳಬಹುದು", ಗುರುನಾಮ್ ಬಹಳ ಹೆಮ್ಮೆಯಿಂದ ಹೇಳಿದ. ಆಗ ಒಂದೇ ಬೈಸಿಕಲ್ ಮೇಲೆ, ಇಬ್ಬರು ರಸ್ತೆಯ ಮಧ್ಯೆ ಹೋಗುತ್ತಿದ್ದುದನ್ನು ಕಂಡು ಅವರ ಮೇಲೆ ಗುಡುಗಿದ. ಹುಡುಗರು ಮರು ಮಾತಿಲ್ಲದೆ ರಸ್ತೆಯ ಬದಿಗೆ ಸರಿದರು.

"ಈ ಹಾರನ್ ಶಬ್ದ ತುಂಬ ಜೋರಾಗಿ ಕೇಳಿಸುತ್ತೆ" ನಾನೆಂದೆ.

ಅವನ ಮನಸ್ಸಿಗೆ ನೋವಾದೀತೆಂಬ ಭಯದಿಂದ ಕೂಡಲೇ "ಪರವಾಗಿಲ್ಲ, ಅದರಿಂದ ತೊಂದರೆ ಏನೂ ಇಲ್ಲ..." ಎಂದೆ.

"ನಿನ್ನ ಹಾರ್ನ್‌ನಲ್ಲಿ ಒಂದಕ್ಕಿಂತ ಹೆಚ್ಚಿನ ಧ್ವನಿ ಬರುವುದಿಲ್ಲವೇ?" ದಲ್‌ಜೀತ್ ಪ್ರಶ್ನಿಸಿದ.

ಈ ಮಾತು ಸ್ವಲ್ಪ ಅತಿಯಾಯಿತೆಂದು ಭಾವಿಸಿದೆ. ಆದರೆ ಗುರುನಾಮ್ ಸಿಂಗ್‌ಗೆ ಪ್ರಶ್ನೆಯಿಂದ ಖುಷಿಯಾಗಿರಬೇಕೆಂದು ನನಗೆ ಅನ್ನಿಸಿತು. "ಗಂಡು ಮತ್ತು ಹೆಣ್ಣು, ಎರಡೂ ಧ್ವನಿಗಳೂ ಇವೆ ನೋಡು" ಎಂದು ಅವನು ಹಾರನ್ ಒತ್ತಿ, ಒಂದು ಜೋರಾದ ಧ್ವನಿ ಮತ್ತು ಇನ್ನೊಂದು ಸಣ್ಣ ಧ್ವನಿಯನ್ನು ಹೊರಮೂಡಿಸಿದ. ಆದರೆ ನಮಗೆ ಎರಡೂ ಕರ್ಣಕಠೋರವಾಗಿದ್ದುವು. ಒಂದು ಒಂಟೆ ರಸ್ತೆಯಡ್ಡ ಓಡಿಹೋಗಿ ಹೊಲದೊಳಗೆ ನುಗ್ಗಿತ್ತು.

"ಇದೊಂದು ಭಯಂಕರ ಹಾರನ್", ಗುರುನಾಮ್ ಸಿಂಗ್ ಹೇಳಿದ.

"ನಾನು ಇದನ್ನು ಈ ಟ್ರಕ್‌ಗೆಂದೇ ವಿಶೇಷವಾಗಿ ಮಾಡಿಸಿದ್ದೇನೆ."

"ನನಗೆ ವಿದೇಶೀ ಹಾರ್ನ್‌ಗಳು ಹಿಡಿಸುವುದಿಲ್ಲ. ಅವುಗಳು ಅಷ್ಟು ಜೋರಾಗಿ ಶಬ್ದ ಮಾಡೋಲ್ಲ. ಭಾರತದ ಹಾರ್ನ್‌ಗಳೇ ಅತ್ಯುತ್ತಮ" ಎಂದ.

ಹಾಗೇ ಸ್ವಲ್ಪ ಹೊತ್ತು ನಿಶ್ಶಬ್ದ ಆವರಿಸಿತು. ನಾನು ಧ್ವನಿಗಳ ಬಗ್ಗೆ ಮನಸ್ಸಿನಲ್ಲೇ ವಿಚಾರ ಮಾಡುತ್ತಿದ್ದೆ. ಕೆಲವು ಧ್ವನಿಗಳು ಕಿವಿಗೆ ಹಿತವಾಗಿರುತ್ತವೆ. ಕೆಲವು ಕಠೋರವಾಗಿರುತ್ತವೆ, ಮತ್ತೆ ಕೆಲವು (ಮೋಟಾರ್ ಹಾರ್ನ್‌ನಂತಹ) ಕೆಲವರಿಗೆ ಮಧುರವಾಗಿದ್ದರೆ ಅದೇ ಶಬ್ದ ಕೆಲವರಿಗೆ ಭಯಂಕರವಾಗಿರುತ್ತದೆ. ಹೀಗೇಕೆ? ಎಂಬ ಪ್ರಶ್ನೆ ನನ್ನನ್ನು ಕಾಡಿತು.

"ಇದು ಹಳೇ ಡೆಲ್ಲಿಯಲ್ಲಿ ಮಾಡಿಸಿದ ಹಾರನ್" ಗುರುನಾಮ್ ಸಿಂಗ್ ನನ್ನ ಏಕಾಗ್ರತೆಯನ್ನು ಭಂಗಪಡಿಸುತ್ತಾ ತನ್ನ ಹಾರನ್ ಬಗ್ಗೆ ಹೇಳಿಕೆ ಮುಂದುವರಿಸಿದ. "ಇದಕ್ಕೆ ಎಪ್ಪತ್ತೈದೇ ರೂಪಾಯಿ. ಇದು ಕೈಲಿ ಮಾಡಿದ್ದು. ಆದರೆ ಇದರಲ್ಲಿ ಒಂದೇ ಒಂದು ಅನಾನುಕೂಲತೆ ಇದೆ. ಅದೇನೆಂದರೆ ಇದು, ಒದ್ದೆಯಾಗಕೂಡದು!"

ಅವನು ಪುನಃ ಹಾರ್ನ್ ಮಾಡಲು ಕೈ ಹಾಕಿದಾಗ ಮಳೆ ಬರಲೆಂದು ಪ್ರಾರ್ಥಿಸೋಣವೆಂದು ಯೋಚಿಸಿದೆ. ಆದರೆ ಆಕಾಶ ಸ್ವಚ್ಛವಾಗಿದ್ದರಿಂದ ಇಂತಹ ಪ್ರಾರ್ಥನೆ, ಅವಿವೇಕದ ಬೇಡಿಕೆಯಾಗುವುದೆಂದು ನಿರ್ಣಯಿಸಿದೆ.

"ಅಹ್ಹಾ, ಇಂತಹ ಹಾರನ್ ಹೊಂದುವುದರ ಮಜಾ ಹೇಗಿರುತ್ತದೆ ಎನ್ನುವುದು ಇನ್ನೂ ನಿನಗೆ ಗೊತ್ತಿಲ್ಲ... ನೀನೇ ಏಕೆ ಬಾರಿಸಿ ನೋಡಬಾರದು?" – ಎಂದು ಡ್ರೈವರ್ ಕೇಳಿದ. ಇದು ನನ್ನನ್ನೇ ಉದ್ದೇಶಿಸಿದ್ದ ಪ್ರಶ್ನೆಯಾಗಿತ್ತು. ನಾನು ಅವನ ಪಕ್ಕದಲ್ಲೇ ಕುಳಿತಿದ್ದರಿಂದ, ದಲ್‌ಜೀತ್ ಬಾಗಿಲ ಹತ್ತಿರ ಇದ್ದ.

"ಒಳ್ಳೇದು ಪರವಾಗಿಲ್ಲ", ನಾನೆಂದೆ. ಅದರ ಹೆಚ್ಚುಗಾರಿಕೆಯನ್ನು ಈಗಾಗಲೇ ನೀನು ಸಾಬೀತುಪಡಿಸಿದ್ದೀಯೆ. "ಇಲ್ಲಪ್ಪಾ, ನೀನು ಪ್ರಯತ್ನಪಟ್ಟು ನೋಡು. ನೀನಿದನ್ನು ಪ್ರಯತ್ನಿಸಲೇಬೇಕು". ಅಣ್ಣ ತನ್ನ ತಮ್ಮನಿಗೆ ಆಟದ ಸಾಮಾನನ್ನು ಉದಾರ ಮನಸ್ಸಿನಿಂದ ಕೊಡುವ ರೀತಿಯಲ್ಲಿ ಅವನು ವರ್ತಿಸಿದ.

ಅವನು ನನ್ನ ಕೈಯನ್ನು ಭದ್ರವಾಗಿ ಹಿಡಿದುಕೊಂಡು ಹಾರ್ನ್‌ಮೇಲೆ ಇಟ್ಟ. ಆಗ ನನಗೆ ಒಂದು ತರಹ ರೋಮಾಂಚಕ ಆನಂದವಾಯಿತು. ಹಾರನ್ ಒತ್ತಿದೆ. ಅದರಿಂದ ಸಂಗೀತ ಲಹರಿ ಟ್ರಕ್‌ನ ಒಳಹೊರಗೆಲ್ಲಾ ಹರಿಯಿತು. ನಾನು ಅದನ್ನು ಅದುಮುತ್ತಾ ಹೋದಂತೆಲ್ಲಾ ನನಗೆ ಚಾಲಕನಿಗಾದಷ್ಟೇ ಸಂತೋಷದ ಅನುಭವವಾಯಿತು; ಏಕೆಂದರೆ ಇಂತಹ ಹಾರನ್, ಇಡೀ ರಸ್ತೆಯ ಮೇಲಿನ ಯಾಜಮಾನ್ಯ ತನ್ನದೇ ಎಂಬ ಠೀವಿಯ ಭಾವನೆಯನ್ನು ಚಾಲಕನಿಗೆ ಉಂಟುಮಾಡುತ್ತಿತ್ತು.



# ಜೈಪುರದ ಹೊರಗೆ ಡಕಾಯಿತರ ಮಧ್ಯೆ

ನಾನು ಜಯಪುರ ತಲುಪುವ ಹೊತ್ತಿಗೆ ಕತ್ತಲು ಕವಿಯಲಾರಂಭಿಸಿತು. ನಾವು ಮುಖ್ಯನಗರವನ್ನು ಹೆಚ್ಚು ನೋಡಲು ಆಗುತ್ತಿರಲಿಲ್ಲ. ನಾವು ರಾತ್ರಿಯನ್ನು ಟ್ರಕ್‌ನಲ್ಲೇ ಹಿಂದುಗಡೆ ಗುರನಾಮ್ ಸಿಂಗ್‌ನೊಡನೆ ಮಲಗಿಕೊಂಡು ಕಳೆದೆವು. ಜೈಪುರದಲ್ಲಿ ಬೇಸಿಗೆಯಲ್ಲೂ ರಾತ್ರಿ ವೇಳೆ ಕೊರೆಯುವ ಚಳಿ ಇತ್ತು. ಗುರುನಾಮ್‌ಸಿಂಗ್ ತನ್ನ ಹಾಸಿಗೆ, ಹೊದಿಕೆಯನ್ನು ನಮ್ಮೊಡನೆ ಹಂಚಿಕೊಂಡ. ಅವನಿಗೆ ಟ್ರಕ್ಕಿನ ಹಲಗೆಯ ಮೇಲೆ ಮಲಗಿ ನಿದ್ರಿಸುವ ಅಭ್ಯಾಸ ಇದ್ದುದರಿಂದ ಅವನು ಅತಿ ಬೇಗನೆ ಜೋರಾಗಿ ಲಯಬದ್ಧವಾಗಿ ಗೊರಕೆಹೊಡೆಯಲಾರಂಭಿಸಿದ.

ನಾನು ಮತ್ತು ದಲಜೀತ್ ಸುಮ್ಮನೆ ತಳಮಳಿಸುತ್ತ ಹೊರಳಾಡುತ್ತಿದ್ದೆವು. ರಾತ್ರಿ ಅವನು ನನ್ನನ್ನು ಅನೇಕ ಬಾರಿ ಒದ್ದನು. ಟ್ರಕ್ಕಿನ ಹಲಗೆ ಗಟ್ಟಿಯಾಗಿತ್ತು. ಎಮ್ಮೆ ತರಹಾವರಿ ವಾಸನೆ ಬೀರುತ್ತಿತ್ತು. ನಮಗೆ ಆಗತಾನೆ ನಿದ್ರೆ ಬರುವುದರಲ್ಲಿತ್ತು. ನಮ್ಮನ್ನು ಎಬ್ಬಿಸಿ ಆಗಲೇ ನಾಲ್ಕು ಘಂಟೆಯಾಗಿದ್ದರಿಂದ ಟ್ರಕ್‌ನಲ್ಲಿ ಕೆಂಪು ಕಲ್ಲನ್ನು ತುಂಬಿಕೊಂಡು ವಾಪಸ್ ಹೋಗಬೇಕಾಗಿದೆ ಯೆಂದು ಹೇಳಿದ. "ಇದೆಂಥ ಬಾಳು" ದಲ್‌ಜೀತ್ ಒಂದು ಕೈನಿಂದ ನಿದ್ದೆಗಣ್ಣನ್ನು ಉಜ್ಜುತ್ತಾ ಹೇಳಿದ. "ನಾನಂತೂ ಖಂಡಿತ ಟ್ರಕ್ ಡ್ರೈವರ್ ಆಗಿ ಕೆಲಸ ಮಾಡಲಾರೆ". "ಎಲ್ಲರೂ ಒಂದಲ್ಲ ಒಂದು ತರಹ ಜೀವನ ಮಾಡಲೇಬೇಕು" ಗುರುನಾಮ್ ಸಿಂಗ್ ಒಬ್ಬ ದಾರ್ಶನಿಕನಂತೆ ನುಡಿದ. "ನನಗೆ ಗಾಡಿ ಓಡಿಸುವುದು ಎಂದರೆ ತುಂಬ ಇಷ್ಟ. ನಾನು 6-7 ವರ್ಷದವನಿದ್ದಾಗಲೇ ನನಗೆ ವಾಹನ ನಡೆಸಲು ಬರುತ್ತಿತ್ತು. ದುಡ್ಡು ಸಹ ಸಾಕಷ್ಟು ಬರುತ್ತೆ. ಡೆಲ್ಲಿಗೆ ಹಿಂತಿರುಗಿದ ಮೇಲೆ, ನನಗೆ ಎರಡು ದಿವಸ ರಜೆ ಸಿಗುತ್ತೆ. ನಾನು ನನ್ನ ಹೆಂಡತಿ ಮಕ್ಕಳೊಡನೆ ಕಾಲ ಕಳೀತೀನಿ. ನಮಸ್ಕಾರ, ಹುಡುಗರೇ, ನೀವೇನಾದರೂ ಪುನಃ ಡೆಲ್ಲಿ ಮೂಲಕ ಬಂದರೆ ನಾನು ಕೆಂಪು ಕೋಟೆಯ ಗೋಡೆಯ ಬಳಿ ಸಿಗುತ್ತೇನೆ".

ನಾವು ಅವನಿಗೆ ಕೈ ಬೀಸಿದೆವು. ಅವನು ಟ್ರಕ್ಕನ್ನು ರಭಸದಿಂದ ಬಿಟ್ಟುಕೊಂಡು ಅಲ್ಲಿದ್ದವರನ್ನೆಲ್ಲಾ ಎಬ್ಬಿಸುತ್ತಾ ಮುಂದೆ ಹೊರಟ. ನಾಯಿಗಳು ಬೊಗಳಿದವು.

ಕೋಳಿ ಕೂಗಲು ಆರಂಭಿಸಿತು. ನಗರದ ಹೊರಭಾಗದಲ್ಲಿ ಒಂದು ದೊಡ್ಡ ಬಯಲು. ಬೋಳು ಬೆಟ್ಟಗಳು ಮತ್ತು ಮರುಭೂಮಿ ಕಾಣುತ್ತಿದ್ದುವು. ನಮಗೆ ಅರಮನೆಯ ಪಾಳು ಪ್ರದೇಶ, ಬೇಟೆಯ ಭಾವಣಿ, ಮುಳ್ಳಿನ ಪೊದೆಗಳು ಬಾಬುಲ್ ಮರಗಳ ನಡುವೆ ಕಾಣುತ್ತಿತ್ತು.

"ನಾವು ಅಲ್ಲಿಗೆ ಹೋಗೋಣ"ದಲ್‌ಜೀತ್ ಸಲಹೆ ಕೊಟ್ಟ.

"ನಾವು ಸರೋವರದಲ್ಲಿ ಸ್ನಾನಮಾಡಿ ವಿಶ್ರಾಂತಿಪಡೆಯೋಣ.ಬೆಳಗಾದ ಮೇಲೆ ಷಹರಿನ ಒಳಗೆ ಹೋಗಿ ರೈಲುಗಾಡಿಗಳ ಬಗ್ಗೆ ವಿಚಾರಿಸೋಣ".

ನಾವು ಸರೋವರದ ತೀರದಲ್ಲಿ ನಡೆಯುತ್ತಾ ಹೋದೆವು. ಎದುರು ದಡ ಮುಟ್ಟುವ ಮೊದಲಿನ ಅರ್ಧಘಂಟೆಯ ಸಮಯ ತುಂಬ ಚೆನ್ನಾಗಿತ್ತು. ಹೊಲದಲ್ಲಿ ಯಾರೂ ಇರಲಿಲ್ಲ. ಆದರೆ ಒಂದು ಒಂಟೆ ಬಾವಿಯ ಸುತ್ತ ತಿರುಗುತ್ತಾ ಸಣ್ಣ ಪರಾತಗಳಲ್ಲಿ ನೀರನ್ನು ಎತ್ತಿ ಹಾಕುತ್ತಿತ್ತು. ಹಳ್ಳಿಯಿಂದ ಹೊಗೆ ಏಳುತ್ತಿತ್ತು. ಬೆಳಗಿನ ನೀರವತೆಯಲ್ಲಿ ಕೊಳಲಿನ ನಾದ ನಮ್ಮನ್ನು ಪರವಶರನ್ನಾಗಿ ಮಾಡಿತು.

ಬೇಟೆಯ ಭಾವಣಿ ಬಳಿಗೆ ಹೋಗಲು ನಮಗೆ ಇಪ್ಪತ್ತು ನಿಮಿಷಗಳು ಹಿಡಿದವು. ಬಹುಶಃ ಒಬ್ಬ ರಾಜಪೂತ ರಾಜಕುಮಾರ ಬೇಟೆಯಾಡುತ್ತಿದ್ದ ಸಮಯದಲ್ಲಿ ನಿರ್ಮಿಸಿಕೊಂಡಿದ್ದ ಬೇಟೆಯ ಭಾವಣಿ ಅದಾಗಿರಬಹುದು. ಭಾವಣಿಯ ಬಾಗಿಲು ನಿರುಪಯುಕ್ತ ಕಲ್ಲು ಮಣ್ಣುಗಳ ರಾಶಿಯಿಂದ ಮುಚ್ಚಿ ಹೋಗಿತ್ತು. ಆದರೆ ಅರ್ಧಗೋಡೆ ಬಿದ್ದು ಹೋಗಿತ್ತು. ನಾವು ಅದರ ಸಂದಿಯಿಂದ ಹತ್ತಿ ಒಂದು ಕಲ್ಲು ಹಾಸಿನಿಂದ ಮಾಡಿದ ಅಂಗಳಕ್ಕೆ ಇಳಿದೆವು. ಅದರ ಮಧ್ಯದಲ್ಲಿ ಒಣಗಿ ಹೋಗಿದ್ದ ಕಲ್ಲಿನ ಒಂದು ಕಾರಂಜಿ ಇತ್ತು. ಕಾರಂಜಿಯ ನೆಲದ ಬಿರುಕಿನಿಂದ ಒಂದು ಸಣ್ಣ ಅರಳಿಮರ ಬೆಳೆಯುತ್ತಿತ್ತು. ನಾವು ಅಂಗಳ ದಾಟಿ ಮುಖ್ಯ ಕಟ್ಟಡಕ್ಕೆ ಬಂದೆವು. ಆಗ ದಲ್‌ಜೀತ್ "ನಿನಗೇನಾದರೂ ವಾಸನೆ ಬರುತ್ತಿದೆಯೇ, ರಸ್ಟಿ?"

"ಹೌದು, ಮೇಲೋಗರದ ವಾಸನೆ" – ಎಂದೆ ನಾನು. ಇಂತಹುದನ್ನು ನಾವು ಅಲ್ಲಿ ನಿರೀಕ್ಷಿಸಿಯೇ ಇರಲಿಲ್ಲ. ಅಂದರೆ ಆ ಸ್ಥಳದಲ್ಲೂ ಯಾರೋ ವಾಸಿಸುತ್ತಿರುವ ಸೂಚನೆ ಸಿಗುತ್ತಿತ್ತು.

ಜಾಗವನ್ನು ಬಿಟ್ಟು ಹೊರಡೋಣ ಅನಿಸಿತು. ಆದರೆ ಕುತೂಹಲ ನಮ್ಮನ್ನು ಬಿಡಲಿಲ್ಲ. ವಾಸನೆ ನಮ್ಮ ಮೂಗಿಗೆ ಬಡಿಯುತ್ತಿತ್ತು. ಆದ್ದರಿಂದ ಇಬ್ಬರೂ ಮುಂದೆ ಹೋಗಿ, ಬಿಸಿಲಿದ್ದ, ಒಂದು ವೆರಾಂಡಕ್ಕೆ ಬಂದೆವು. ಅಲ್ಲಿಂದ ಕತ್ತಲೆ ಕೋಣೆಗೆ ಒಯ್ಯುವ ಒಂದು ಬಾಗಿಲ ಬಳಿಗೆ ಬಂದೆವು. ಆ ಕೋಣೆಯಿಂದ ಮೇಲೋಗರದ ವಾಸನೆ ಬರುತ್ತಿತ್ತು. ಪರಿಚಿತವಲ್ಲದ ಆ ಪರಿಸರದಲ್ಲಿ ಅನುಮಾನಿಸುತ್ತಾ ನಿಂತೆವು.

"ನಡಿ, ಮುಂದೆ ನಡೆ", ದಲ್‌ಜೀತ್ ಹೇಳಿದ.

"ನಾನು ನಿನಗಾಗಿ ಕಾಯುತ್ತಿದ್ದೆ, ನಾನೆಂದೆ. ಇಬ್ಬರೂ ಆ ಕೋಣೆ ಒಳಕ್ಕೆ ಕಾಲಿಟ್ಟೆವು. ಆದರೆ ಅದು ಖಾಲಿಯಾಗಿತ್ತು. ಅಲ್ಲೊಂದು ಮೂಲೆಯಲ್ಲಿ ಒಂದು ಒಲೆ ಇತ್ತು. ಅದರ

ಮೇಲೆ ಒಂದು ಮಡಕೆಯಲ್ಲಿ ಸುವಾಸನೆಯಿಂದ ಕೂಡಿನ ಪದಾರ್ಥ ಕುದಿಯುತ್ತಿತ್ತು. ಆದರೆ ಅಡಿಗೆ ಮಾಡುವವನ ಸುಳಿವೇ ಇರಲಿಲ್ಲ.

ನಾನು ಎಚ್ಚರಿಕೆಯಿಂದ ಒಲೆ ಹತ್ತಿರ ಹೋಗಿ ಮಡಕೆಯ ಮೇಲಿನ ಮುಚ್ಚಳ ಎತ್ತಿ ಮೂಸಿನೋಡಿದೆ. ಚಿಕನ್ ಕರಿ! ಗೊತ್ತು ಗುರಿ ಇಲ್ಲದೆ ಪಾಳು ಬಿದ್ದಿದ್ದ ಬೇಟೆಯ ಛಾವಣಿಯಲ್ಲಿ ಚಿಕನ್ ಕರಿ! ಅದು ಹೇಗೆ, ಏಕೆ ಅಲ್ಲಿದೆ ಎಂಬುದರ ಬಗ್ಗೆ ನಾವು ಒಂದು ಸ್ವಲ್ಪವೂ ವಿಸ್ಮಯಪಡಲಿಲ್ಲ. ಅಲ್ಲಿ ಬೇರೆ ಪಾತ್ರೆಗಳಿರಲಿಲ್ಲ. ಆದ್ದರಿಂದ ನಾವು ಮೋಲೋಗರದೊಳಗೆ ಬೆರಳುಗಳನ್ನು ಅದ್ದಿ ಬಾಯಿಗೆ ಇಟ್ಟಕೊಳ್ಳುತ್ತಿದ್ದೆವು. ಅಷ್ಟರಲ್ಲಿ ಒಂದು ಜೊತೆ ಬಲವಾದ ತೋಳುಗಳು ನನ್ನನ್ನು ಕಾಲುಗಳ ಸಮೇತ ಮೇಲೆತ್ತಿದವು.

ನಾನು ಹೇಗೆ ಬೆಚ್ಚಿಬಿದ್ದೆನೆಂದರೆ ಅದರ ರಭಸಕ್ಕೆ ಚಿಕನ್‌ಕರಿ ತುಂಡು ಹಾಗೇ ಬಿದ್ದು ಹೋಯಿತು. ಆತನ ತೋಳುಗಳಿಂದ ಬಿಡಿಸಿಕೊಳ್ಳಲು ಬಹಳ ಹೆಣಗಾಡಿದೆ. ಆದರೆ ಅವನ ತೋಳುಗಳು ಬಹಳ ಶಕ್ತಿಯುತವಾಗಿದ್ದವು. ಅವನ ಮುಂಗೈ ಮತ್ತು ತೋಳುಗಳ ಮೇಲಿದ್ದ ಕರಿ ಕೂದಲಿನಿಂದ ಅದು ಒಬ್ಬ ಮನುಷ್ಯನ ತೋಳುಗಳು, ಪಿಶಾಚಿಯದಲ್ಲ ಎಂದು ಖಚಿತವಾಯಿತು. ನಾನು ಸೆಣಸಾಡಿದೆ, ಒದ್ದೆ. ಆದರೆ ಮತ್ತೊಬ್ಬ ನನ್ನ ಕಾಲುಗಳನ್ನು ಹಿಡಿದೆಳೆದ. ನನಗೆ ದಲ್‌ಜೀತ್ ಯಾರ ಜೊತೆಯೋ ಸೆಣಸಾಡುತ್ತಿರುವ ಶಬ್ದ ಕೇಳಿ ಬಂದಿತು. ಅವನನ್ನು ಕೂಗಲು ಪ್ರಯತ್ನಿಸಿದೆ, ಅಷ್ಟರಲ್ಲಿ ಮೂರನೇ ವ್ಯಕ್ತಿಯೊಬ್ಬ ನನ್ನ ಬಾಯೊಳಗೆ ಒಂದು ಎಣ್ಣೆಮಯವಾದ ಬಟ್ಟೆಯನ್ನು ತುರುಕಿದ. ಅವನು ನನ್ನ ಕೈಗಳನ್ನು ಭದ್ರವಾಗಿ ಹಿಡಿದುಕೊಂಡ. ಇನ್ನೊಬ್ಬ ಒಂದು ಹಗ್ಗದಿಂದ ಎರಡು ಕಾಲುಗಳನ್ನೂ ಸೇರಿಸಿ ಕಟ್ಟಿ ಮೂಟೆಯಂತೆ ನೆಲದ ಮೇಲೆ ಹಾಕಿದರು, ಮುಖ ಕೆಳಗಡೆಗಿತ್ತು ಅವರು ನನ್ನ ಕೈಕಾಲುಗಳನ್ನು ಕಟ್ಟಿದ್ದರು.

ದಲ್‌ಜೀತ್‌ನನ್ನು ನೋಡಿದೆ. ಅವನೂ ಇದೇ ಸ್ಥಿತಿಯಲ್ಲಿ ಕೋಣೆಯ ಇನ್ನೊಂದು ಮೂಲೆಯಲ್ಲಿ ಬಿದ್ದಿದ್ದ. ನಾವು ಏನೂ ಮಾಡುವ ಸ್ಥಿತಿಯಲ್ಲಿ ಇರಲಿಲ್ಲ. ಆ ಕೋಣೆಯಲ್ಲಿ ಕಡೇ ಪಕ್ಷ ಐದು ಜನರಿದ್ದರು.

"ಅವನಿನ್ನೂ ಹುಡುಗ", ಅವರಲ್ಲಿ ಒಬ್ಬ ಗ್ರಾಮ್ಯ ಹಿಂದಿಯಲ್ಲಿ (ನನಗದು ಅರ್ಥವಾಗಿದ್ದರಿಂದ ನನಗೇ ಆಶ್ಚರ್ಯವಾಯಿತು) ಬಗ್ಗಿ, ನನ್ನ ಮುಖ ನೋಡಿ, ಹೇಳಿದ. ಕತ್ತಲಲ್ಲಿ ಅವನು ಹೇಗಿದ್ದಾನೆ ಎಂದು ಗೊತ್ತಾಗಲಿಲ್ಲ. ಆದರೆ ಅವನಿಗೆ ಗಡ್ಡ ಇದೆ ಅಂತ ನನಗೆ ತಿಳಿಯಿತು. ಏಕೆಂದರೆ ಅವನ ಗಡ್ಡ ನನ್ನ ಕುತ್ತಿಗೆಗೆ ತಾಗುತ್ತಿತ್ತು. ಅಲ್ಲದೆ ಅವನ ಉಸಿರಿನಲ್ಲಿ ಬೆಳ್ಳುಳ್ಳಿ ವಾಸನೆ ಬರುತ್ತಿತ್ತು.

"ಹುಡುಗನೋ, ದೊಡ್ಡವನೋ ಅಥವಾ ಹುಡುಗಿಯೋ?" ಇನ್ನೊಬ್ಬ ಕೇಳಿದ. "ಯಾರೇ ಆಗಲಿ, ನಮ್ಮ ಊಟ ಲಪಟಾಯಿಸಲು ಪ್ರಯತ್ನಿಸಿದವರಿಗೆ ತಕ್ಕ ಶಾಸ್ತಿಯಾಗಬೇಕು".

"ಇವನು ತುಂಬಾ ಬೆಳ್ಳಗಿದ್ದಾನೆ", ಗಡ್ಡದವ ಹೇಳಿದ.

"ಅವನು ವಿದೇಶೀಯನೇ?"

"ಇಲ್ಲ, ಅವನು ಸ್ವದೇಶಿ–ವಿದೇಶೀ – ಎರಡೂ ಅರ್ಧರ್ಧ. ನಡೀರಿ ಅವರನ್ನು ಅಂಗಳಕ್ಕೆ ಕರೆದೊಯ್ಯೋಣ. ಅಲ್ಲಿ ಹೊರಗಡೆ ಚೆನ್ನಾಗಿ ನೋಡೋಣ".

"ಇಲ್ಲ, ನಾವು ಯಾರಿಗೂ ಕಾಣಿಸಿಕೊಳ್ಳಬಾರದು. ಹಳ್ಳಿಯವರು ನಮ್ಮನ್ನು ಇಲ್ಲಿ ನೋಡಿಬಿಟ್ಟರೆ, ಸಮಾಚಾರ ಕೂಡಲೇ ಎಲ್ಲಾ ಕಡೆಗೂ ಹರಡಿಬಿಡುತ್ತೆ. ನಾವು ಈ ಜಾಗ ಪುನಃ ಉಪಯೋಗಿಸಬೇಕೂಂತ ಆಸೆ".

"ಹಾಗಾದರೆ ದೀಪ ಹಚ್ಚು".

ಸೀಮೆ ಎಣ್ಣೆ ಲಾಂಧ್ರವನ್ನು ಹಚ್ಚಲು ಹೊರಟವನು ಆ ಕೋಣೆಯಲ್ಲಿದ್ದ ಎಲ್ಲರಿಗಿಂತ ಎತ್ತರವಾಗಿದ್ದನು. ಲಾಂದ್ರದ ಬತ್ತಿ ಚೆನ್ನಾಗಿ ಹತ್ತಿಕೊಂಡ ಕೂಡಲೆ, ಗೋಡೆಯ ಮೇಲೆ ಅವರ ದೊಡ್ಡ ನೆರಳು ಬಿತ್ತು.

ಅವನೊಬ್ಬ ದೈತ್ಯನಂತಿದ್ದ. ಆರಡಿಗಳಿಗೂ ಹೆಚ್ಚು ಎತ್ತರ ಇದ್ದ ಅವನು ಎದೆ ಬಿಟ್ಟುಕೊಂಡಿದ್ದ. ತನ್ನ ತಲೆಗೂದಲನ್ನು ಚಿಕ್ಕದಾಗಿ ಕತ್ತರಿಸಿಕೊಂಡಿದ್ದ. ಅವನ ಉಬ್ಬಿದ ಮಾಂಸಖಂಡಗಳು ಕಬ್ಬಿಣದಷ್ಟು ಗಟ್ಟಿಯಾಗಿದ್ದವು. ಗಡ್ಡದ ಮನುಷ್ಯನ ಹಿಂದಿದ್ದವನೇ ಅಪ್ಪಣೆ ಮಾಡುತ್ತಿದ್ದ ವ್ಯಕ್ತಿಯೆಂದು ನನಗೆ ಅನ್ನಿಸಿತು. ನಾನು ಇನ್ನೂ ಅವನನ್ನು ಸರಿಯಾಗಿ ನೋಡಲು ಆಗಿರಲಿಲ್ಲ. "ಅವನನ್ನು ಪಕ್ಕಕ್ಕೆ ತಿರುಗಿಸು, ನಾವು ಅವನನ್ನು ಚೆನ್ನಾಗಿ ನೋಡೋಣ", ಎಂದ ಗಡ್ಡದ ಮನುಷ್ಯ. ದೈತ್ಯನಂತಿದ್ದ ವ್ಯಕ್ತಿ ನನ್ನನ್ನು ನೆಲದ ಮೇಲೆ ಉರುಳಿಸಿದ.

ನಾನು ನಿಸ್ಸಹಾಯಕನಾಗಿ ಮಸಿ ಹಿಡಿದಿದ್ದ ಸೂರನ್ನೇ ದಿಟ್ಟಿಸಿ ನೋಡುತ್ತಿದ್ದೆ. ಕೆಲವು ಕ್ಷಣಗಳ ನಂತರ ಮೂರು ಮುಖಗಳು ನನ್ನನ್ನು ದುರುಗುಟ್ಟಿಕೊಂಡು ನೋಡಿದವು.

ಕತ್ತಲು ಕವಿದಿದ್ದ ಆ ಕೋಣೆಯಲ್ಲಿ ಅವರು ನನ್ನನ್ನು ಚೆನ್ನಾಗಿ ಬಿಗಿದು ಕಟ್ಟಿದ್ದರು. ಸಂಪೂರ್ಣವಾಗಿ ಅವರ ಕೃಪೆಯನ್ನು ಅವಲಂಬಿಸಿದ್ದ ನಾನು, ಭಯದಿಂದ ತತ್ತರಿಸಿದೆ. ಅವರು ಅಪರಾಧಿಗಳಂತೆ ಕಾಣಿಸುತ್ತಿದ್ದರು. ಬಹುಷಃ ಅವರು ದರೋಡೆಕಾರರಿರಬೇಕು. ಪಾಳುಬಿದ್ದ ಆ ಸ್ಥಳವನ್ನು ಅವರು ಅಡಗಿಕೊಳ್ಳಲು ಉಪಯೋಗಿಸುತ್ತಿದ್ದರೆಂದು ನನಗನಿಸಿತು.

ಆ ಗಡ್ಡದವನಿಗೆ ಉಬ್ಬಿದ ಕಪೋಲಗಳು ಮತ್ತು ಓರೆಗಣ್ಣುಗಳಿದ್ದವು. ದೈತ್ಯನಂತಿದ್ದ ವ್ಯಕ್ತಿಗೆ ದಪ್ಪ ತುಟಿಗಳಿದ್ದರೂ ಅವನ ಮುಖ ಕ್ರೂರವಾಗಿರಲಿಲ್ಲ. ಆದರೆ ನನಗೆ ಎಲ್ಲರಿಗಿಂತ ಹೆಚ್ಚಾಗಿ ಹೆದರಿಕೆ ಹುಟ್ಟಿಸಿದವನು ಮೂರನೆಯವನು. ಅವನು ಕುಳ್ಳ ಎಂದು ಹೇಳಬಹುದು.ಅವನು ನನ್ನ ಕಡೆಗೊಂದು ನಗೆ ಬೀರುತ್ತಿದ್ದ. ಆದರೆ ಆ ಕುಹಕ ನಗೆ ನಡುಕ ಹುಟ್ಟಿಸುತ್ತಿತ್ತು. "ನೀವು ನಮ್ಮ ಚಿಕನ್‌ಕರಿ ಕದ್ದು ತಿಂದದ್ದು, ಅಷ್ಟೇನೂ ಒಳ್ಳೆಯ ಕೆಲಸವಲ್ಲ. ಅವನು ಮೆಲುಧ್ವನಿಯಲ್ಲಿ ಹೇಳಿದ. ಅದನ್ನು ಕದ್ದು ತಿನ್ನಲು ಭಾಂಬಿರಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ".

"ಹೌದು, ಅದೂ ನಾನು ರಾತ್ರಿಯಲ್ಲಿ", ದೈತ್ಯಾಕಾರದ ವ್ಯಕ್ತಿ ಹೇಳಿದ. ಅವನು ಭಾಂಬರಿ ಎಂಬ ಅಡ್ಡ ಹೆಸರು ಪಡೆದಿದ್ದ. ಹಾಗೆಂದರೆ ತಿರುಗುವ ಬುಗರಿ ಎಂದರ್ಥ. "ನನ್ನನ್ನು ಮೂರು ನಾಯಿಗಳಲ್ಲದೆ ಅರ್ಧ ಹಳ್ಳಿಯೇ ಅಟ್ಟಿಸಿಕೊಂಡು ಬಂದಿತು. ಅವರಿಗೆ

ಹೇಗೆ ಕೈ ಕೊಟ್ಟು ತಪ್ಪಿಸಿಕೊಂಡು ಬಂದೆ ಅಂದರೆ!" ಅವನು ತನ್ನಷ್ಟಕ್ಕೆ ತಾನೇ ಗಹಗಹಿಸಿ ನಕ್ಕ.

"ಅಪಹಾಸ್ಯ ಮಾಡಿಕೊಂಡು ನಗುವುದು ಸುಲಭ" – ಎಂದು ಸಪ್ಪೆ ಮೋರೆ ಹಾಕಿಕೊಂಡು ಗಡ್ಡದವನು ಹೇಳಿದ.

"ಚಿಕನ್ ಕರ್ರಿ ಮುಖ್ಯವಲ್ಲ, ನಿಜವಾಗಿಯೂ ಅವರ‍್ಯಾಕೆ ಇಲ್ಲಿಗೆ ಬಂದಿದ್ದಾರೆ? ಅವರಿಗೆ ಏನಾದರೂ ಗೊತ್ತಿದೆ ಅನ್ನಿಸುತ್ತದೆಯೇ ನಿನಗೆ?"

"ನಾವು ಇವನನ್ನ ಕೇಳೋಣ", ಕುಳ್ಳಗಿದ್ದ ದುಷ್ಟ ವ್ಯಕ್ತಿ ಹೇಳಿದ. ಅವನು ಬಗ್ಗಿಕೊಂಡು ನನ್ನ ಕಣ್ಣನ್ನೇ ನೋಡಿದ ಬಳಿಕ ಬಾಯೊಳಗೆ ತುರುಕಿದ ಬಟ್ಟೆ ಎಳೆದು ಹಾಕಿದ. ತುರುಕಿದ್ದ ಬಟ್ಟೆ ಎಳೆದ ಕೂಡಲೇ ತಣ್ಣನೆಯ ಗಟ್ಟಿಯಾದ ವಸ್ತು ನನ್ನ ಕೆಳಗಿನ ಹಲ್ಲುಗಳಿಗೆ ತಗುಲಿದಂತಾಯ್ತು. ಅಗ ಒಬ್ಬ ದಂತವೈದ್ಯ ತನ್ನ ರೋಗಿಯ ಹಲ್ಲುಗಳನ್ನು ಪರೀಕ್ಷೆ ಮಾಡಿದಾಗ ಆಗುವ ಅನುಭವ ನನಗಾಯಿತು. ಆದರೆ ಅ ಕುಳ್ಳ ಒಂದು ಕಠಾರಿಯ ಚೂಪಾದ ತುದಿಯನ್ನು ನನ್ನ ಹಲ್ಲಿಗೆ ತಾಕಿಸುತ್ತಿದ್ದ.

"ನಾವು ಹೇಳೋವರೆಗೂ ನೀನು ಮಾತಾಡಲೂ ಕೂಡದು, ಕಿರುಚಲೂ ಕೂಡದು" ಅವನೆಂದ. ನಂತರ, ಕತ್ತಿಯನ್ನು ಹೊರಗೆ ತೆಗೆದು ಹಿಂದಕ್ಕೆ ಹೋಗಿ ನಿಂತ. "ಇಲ್ಲಿ ನೋಡು, ನಾನೇನು ಹೇಳ್ತಿದೀನಿ ಅಂತ ನಿನಗೆ ಅರ್ಥವಾಗುತ್ತಿದೆ ತಾನೆ?" ನಾನು ತಲೆ ಅಳ್ಳಾಡಿಸಿದೆ. ಭಾಂಬಿರಿ ಮುಂದೆ ಬಂದು ನನ್ನನ್ನು ಆರಾಮವಾಗಿ ಎತ್ತಿ ಗೋಡೆಗೆ ಒರಗಿಸಿ ಕೂರಿಸಿದ. "ನನ್ನ ಮಣಿಕಟ್ಟು ನೋಯ್ತಾ ಇದೆ" ನಾನೆಂದೆ. ಭಾಂಬಿರಿ ನಮ್ಮ ಕೈಗಳಿಗೆ ಕಟ್ಟಿದ್ದ ಹಗ್ಗವನ್ನು ಬಿಚ್ಚಲು ಹೋದ. ಆದರೆ ಅವನ ಯಜಮಾನ ಹೇಳಿದ "ಅವನಿಗೆ ಕಟ್ಟಿರುವ ಹಗ್ಗವನ್ನು ಬಿಚ್ಚಬೇಡ ನೀನೊಬ್ಬ ಮೂರ್ಖ", ಎಂದು ಯಜಮಾನ ಹೇಳಿದಾಗ ದೈತ್ಯ ವ್ಯಕ್ತಿ ಅತ್ತ ಕಡೆ ಹೊರಟು ಹೋದ.

"ಈಗ ಹೇಳಿ, ನೀವು ಇಲ್ಲೇನು ಮಾಡುತ್ತಿದ್ದೀರಾ" ಎಂದ ಯಜಮಾನ.

"ನಾವು ವಿಶ್ರಮಿಸಿಕೊಳ್ಳಲು ಯಾವುದಾದರೂ ಜಾಗ ಇದೆಯೇ ಎಂದು ಹುಡುಕುತ್ತಿದ್ದೆವು." ನಾನೆಂದೆ.

"ಅವನ ಮೊಣಕೈ ತಿರಿಚು, ಭಾಂಬಿರಿ".

ನನ್ನ ಕೈ ಜೋರಾಗಿ ತಿರಿಚಲು ಅ ದೈತ್ಯ ಹೇಳಿರಲಾರ ಎಂದು ನನಗನಿಸಿತು. ಅವನು ನನ್ನ ಕೈ ಮೆತ್ತಗೆ ತಿರುಚಿದ್ದ. ಅದನ್ನೇ ತಡೆದುಕೊಳ್ಳಲಾಗದೆ ನನಗೆ ಅಳು ಬರುವಂತಾಯಿತು. ಅವನು ತನ್ನ ಜೀವಮಾನದಲ್ಲಿ ಯಾವಾಗಲೋ ಒಮ್ಮೆ ಕುಸ್ತಿ ಆಡಿರಲೇಬೇಕು. "ಸುಳ್ಳು ಹೇಳಬೇಡ" ಯಜಮಾನ ಹೇಳಿದ. "ಸುಳ್ಳು ಹೇಳೋದು ಒಳ್ಳೆಯದಲ್ಲ. ನೀವುಗಳು ನಮ್ಮ ಮೇಲೆ ಗೂಢಚಾರ ಕೆಲಸ ಮಾಡುತ್ತಿರುವಿರಾ?"

"ನಮಗೆ ನಿಮ್ಮ ಬಗ್ಗೆ ಏನೂ ಗೊತ್ತಿಲ್ಲ" ನಾನು ಹತಾಶನಾಗಿ ಹೇಳಿದೆ. "ನಾವು ಜಯಪುರಕ್ಕೆ ಬಂದು ಒಂದು ರಾತ್ರಿ ಮಾತ್ರ ಆಗಿದೆ ಅಷ್ಟೇ"

"ಅವರು ಗುಪ್ತಚಾರರಂತೆ ಕಾಣಿಸೋದಿಲ್ಲ" ಗಡ್ಡದವ ಎಂದ.

"ಅವರಿನ್ನೂ ಹುಡುಗರು".

"ನಾವು ಕರಾವಳಿಗೆ ಹೋಗುತ್ತಿದ್ದೇವೆ", ನಾನೆಂದೆ. "ನಮ್ಮ ಹತ್ತಿರ ಹೆಚ್ಚು ಹಣವೂ ಇಲ್ಲ".

"ಅದಕ್ಕೇ ನೀವು ನಮ್ಮ ಊಟ ಕದಿಯೋದರಲ್ಲಿದ್ದಿರಿ ಅಲ್ಲವೇ?"

ಕಟುವಾಗಿ ಹೇಳಿದ. ನಾವು ಪೋಲಿಸರ ಗುಪ್ತಚಾರರಿರಬಹುದೇನೋ ಅನ್ನುವ ಚಿಂತೆಗಿಂತ ಅವನಿಗೆ ತನ್ನ ಊಟ ತಪ್ಪಿ ಹೋಯಿತಲ್ಲಾ ಎನ್ನುವ ಚಿಂತೆಯೇ ಹೆಚ್ಚಾಗಿತ್ತು.

"ಸರಿ, ಅವರ ಹತ್ತಿರ ಏನಾದರೂ ಹಣ ಇದೆಯೇನೋ ನೋಡೋಣ" ಎಂದ ಕುಳ್ಳ. ಅವನು ನನ್ನ ಜೇಬುಗಳನ್ನು ಹುಡುಕಾಡಿ ನನ್ನ ಹತ್ತಿರವಿದ್ದ ಕೆಲವು ನೋಟುಗಳು ಮತ್ತು ಚಿಲ್ಲರೆ ಕಾಸು ತೆಗೆದು ತೋರಿಸಿದ ನಂತರ ಅವನು, ಬಾಯಿಗೆ ಬಟ್ಟೆ ತುರುಕಿಸಿಕೊಂಡು ಇನ್ನೂ ಅಸಹಾಯಕನಾಗಿಯೇ ಇದ್ದ ದಲ್‌ಜೀತ್ ಬಳಿ ಹೋದ. ಅವನು ದಲ್‌ಜೀತ್ ಬಳಿ ಇದ್ದ ಚಿಕ್ಕ ಹಣದ ಚೀಲವನ್ನು ಹೊರಗೆಳೆದು ಅದನ್ನು ಪರೀಕ್ಷಿಸಿನೋಡಿ, "ಇಲ್ಲಿ ಮೂವತ್ತೋ, ನಲವತ್ತೋ ರೂಪಾಯಿದೆ" ಎಂದ. ಅವನು ಅ ಹಣವನ್ನು ತನ್ನ ಜೇಬಿಗೆ ಹಾಕಿಕೊಂಡ.

"ಇನ್ನು ನಾನು ಅವರನ್ನು ಬಿಟ್ಟು ಬಿಡಲೇ?" ಭಾಂಬಿರಿ ಕೇಳಿದ.

"ಇಲ್ಲ, ನೀನೊಬ್ಬ ಶತ ಮೂರ್ಖ. ಅವರು ಎಚ್ಚರಿಕೆ ಕೊಟ್ಟುಬಿಡುತ್ತಾರೆ. ಉಳಿದಿರೋ ಊಟ ಮುಗಿಸಿ, ನಮ್ಮ ಪಾಡಿಗೆ ನಾವು ಹೊರಟು ಹೋಗೋಣ".

ಡಕಾಯಿತರು ಊಟ ಮುಗಿಸುವವರೆಗೆ, ಹದಿನೈದು ನಿಮಿಷಗಳ ಕಾಲ ನಾವು ಬಿಗಿದ ಕಟ್ಟುಗಳೊಡನೆ ಅಲ್ಲೇ ಬಿದ್ದಿದ್ದೆವು. ಅವರು ಸ್ವಲ್ಪವೂ ಬಿಡದೆ ಚೆನ್ನಾಗಿ ತಿಂದರು. ಊಟ ಮುಗಿಸಿದ ಮೇಲೆ ಕೈ ಬೆರಳುಗಳನ್ನು ಚೆನ್ನಾಗಿ ಚೀಪಿಕೊಂಡು ಭರ್ಜರಿಯಾಗಿ ತೇಗಿದರು. ಭಾಂಬಿರಿಯ ತೇಗು ಅದ್ಭುತವಾಗಿತ್ತು. ಅದು ಅವನ ಉದರದ ಆಳದಿಂದ ಮೇಲೆದ್ದು, ಆರ್ಭಟವಾಗಿ ಹೊರಬಂದಿತ್ತು. ತೇಗಿದ ಶಬ್ದ ಇಡೀ ಕೋಣೆಯನ್ನೇ ಆವರಿಸಿತು. ಕುಳ್ಳ ಬಹಳ ಮೆಲ್ಲಗೆ ತೇಗಿದ. ತೇಗುವುದರಲ್ಲೂ ಅವನು ತನ್ನ ಜಿಪುಣತನ ತೋರಿಸಿದ್ದ.

"ಅವರುಗಳನ್ನು ಇಲ್ಲೇ ಬಿಟ್ಟು ಹೋಗೋಣ" ನನ್ನಕಡೆ ಕುಹಕ ನಗೆ ನಗುತ್ತಾ ನುಡಿದ. "ಅವರು ಬೇಕಾದಷ್ಟು ವಿಶ್ರಾಂತಿ ಪಡೆಯಲಿ. ಒಂದೆರಡು ದಿವಸಗಳವರೆಗೆ ಅವರಿರೋದು ಯಾರಿಗೂ ಗೊತ್ತಾಗೋಲ್ಲ. ಭಾಂಬಿರಿ, ಬೆಳ್ಳನೆ ಹುಡುಗನ ಬಾಯಿಗೆ ಪುನಃ ಬಟ್ಟೆ ತುರುಕು" ಎಂದ ಯಜಮಾನ.

ದೈತ್ಯ ಲಾಂಧ್ರ ಆರಿಸುತ್ತಾ ನನ್ನ ಮೇಲೆ ಬಗ್ಗಿದ. ಕತ್ತಲೆಯಲ್ಲೂ ನನಗೆ ಅವನ ಕಣ್ಣುಗಳಲ್ಲಿ ಕನಿಕರದ ಬೆಳಕು ಕಾಣಿಸಿತು. ಅವನು ನನ್ನ ಬಾಯಿಗೆ ಪುನಃ ಆ ಕೊಳಕು ಚಿಂದಿ ಬಟ್ಟೆ ತುರುಕಿ, ತುಂಡು ಬಟ್ಟೆಯಿಂದ ಭದ್ರವಾಗಿ ಬಿಗಿದ. ಆಮೇಲೆ ನಮ್ಮ ಹತ್ತಿರ ಬೆಳಕಿರದಿದ್ದರಿಂದ ತನ್ನ ಕೈಗಳನ್ನು ನನ್ನ ಹಿಂಬದಿಗೆ ತೂರಿಸಿ ಬೇಗ ನನ್ನ ಕಟ್ಟುಗಳನ್ನು ಸಡಿಲಗೊಳಿಸಿದ.

"ಸರಿ ನಡೀರಿ, ಇನ್ನು ನಾವು ಹೋಗೋಣ" ನಾಯಕ ಹೇಳಿದ. ಅವನು ಕೋಣೆಯಿಂದ ಹೊರಗೆ ಹೋದ. ಉಳಿದವರು ಅವನನ್ನು ಹಿಂಬಾಲಿಸಿದರು. ಎಲ್ಲರಿಗಿಂತ ಕಡೆಯಲ್ಲಿ ಹೋದವನು ಭಾಂಬಿರಿ. ಆದರೆ ಅವನು ಹಿಂತಿರುಗಿ ನಮ್ಮನ್ನು ನೋಡಲಿಲ್ಲ. ನಾನು ಅವರುಗಳ ಹೆಜ್ಜೆ ಶಬ್ದ ಇನ್ನು ಕೇಳದೆ ಇರುವವರೆಗೆ ಕಾದಿದ್ದು, ನಂತರ ಭಾಂಬಿರಿ ಸಡಿಲಗೊಳಿಸಿದ್ದ ಹಗ್ಗದಿಂದ ಕೈಗಳನ್ನು ಜಾರಿಸಿಕೊಂಡು ನನ್ನ ಬಾಯಲ್ಲಿ ತುರುಕಿದ್ದ ಬಟ್ಟೆಯನ್ನು ತಿರುಚಿ ತೆಗೆದೆ. ನಾನು ನನ್ನ ಕಾಲುಗಳನ್ನು ಬಿಡಿಸಿಕೊಂಡ ನಂತರ, ದಲ್‌ಜೀತ್ ಕಡೆಗೆ ತೆವಳಿದೆ. ಅವನ ಬಾಯಿಗೆ ತುರುಕಿದ್ದ ಬಟ್ಟೆ ತೆಗೆದು, ಆಮೇಲೆ ಅವನ ಮೊಣಕೈಗೆ ಕಟ್ಟಿದ್ದ ಹಗ್ಗವನ್ನು ಬಿಚ್ಚಲು ಶುರುಮಾಡಿದೆ. "ನೀನು ಹೇಗೆ ಬಿಡಿಸಿಕೊಂಡೆ?" ಅವನ ಸ್ವರ ಹೊರಡುವಂತಾದ ಕೂಡಲೇ ಕೇಳಿದ.

"ಜೋರಾಗಿ ಮಾತಾಡಬೇಡ", "ಅವರು ವಾಪಸ್ ಬಂದರೂ ಬರಬಹುದು. ಅವರ ಅಡಿಗೆ ಪಾತ್ರೆಗಳು ಇನ್ನೂ ಇಲ್ಲೇ ಇವೆ." ನಾನೆಂದೆ.

"ಆದರೆ ನೀನು ಹೇಗೆ ಬಿಚ್ಚಿಕೊಂಡೆ, ರಸ್ಟಿ?" "ಆ ದೊಡ್ಡ ಗಾತ್ರದ ಆಸಾಮಿ, ಬಾಕಿಯವರಿಗೆ ಗೊತ್ತಾಗದಂತೆ ನನ್ನ ಕೈಗಳನ್ನು ಬಿಡಿಸಿಕೊಳ್ಳಲು ಸುಲಭವಾಗುವಂತೆ ಸಡಿಲಗೊಳಿಸಿದ್ದ. ಅವನಿಗೆ ನಮ್ಮ ಮೇಲೆ ಮರುಕ ಹುಟ್ಟಿರಬೇಕು" ಎಂದೆ .

"ದೇವರು ಅವನ ಸಹೃದಯತೆಯನ್ನು ಕಾಪಾಡಲಿ", ದಲ್‌ಜೀತ್ ಭಾವೋದ್ರೇಕದಿಂದ ಹೇಳಿದ. "ನಾವಿಲ್ಲಿ ಎಷ್ಟು ದಿವಸ ಉಪವಾಸ ಬಿದ್ದರಬೇಕಾಗಿತ್ತೋ ಅಥವಾ ಬಾಯಾರಿಕೆಯಿಂದ ಸಾಯಬೇಕಾಗಿತ್ತೋ ಗೊತ್ತಿಲ್ಲ". ಕೈ ಕಾಲುಗಳು ಸ್ವತಂತ್ರವಾದ ಕೂಡಲೇ ದಲ್‌ಜೀತ್ ಎದ್ದು ಕೂತ. ಬಳಿಕ ಕೈ ಕಾಲುಗಳನ್ನು ನೀಡಲು ಶುರುಮಾಡಿದ. ಆಮೇಲೆ ಮಂಡಿಗೆ ಮುಖ ಊರಿ ಕೂತುಕೊಂಡು ನನ್ನ ಕಡೆ ಆತಂಕದಿಂದ ನೋಡಿದ.

"ನಾವೀಗ ಏನು ಮಾಡೋಣ ರಸ್ಟಿ?" ಅವರು ನಮ್ಮ ದುಡ್ಡು ಕಿತ್ತುಕೊಂಡು ಹೋಗಿದ್ದಾರೆ. ನಾವು ಎಲ್ಲಿಗೂ ಹೋಗುವ ಸ್ಥಿತಿಯಲ್ಲಿಲ್ಲ. ಮುಂದಕ್ಕೂ ಇಲ್ಲ, ಹಿಂದಕ್ಕೂ ಇಲ್ಲ. ನಾವು ಹತ್ತಿರದ ಪೋಲೀಸ್‌ಸ್ಟೇಷನ್‌ಗೆ ಹೋಗಿ ಅಲ್ಲಿ ಎಲ್ಲ ವಿಷಯಗಳನ್ನು ತಿಳಿಸಬೇಕು".

"ಅವರು ನಮ್ಮ ಬೆನ್ನು ಚೀಲಗಳನ್ನು ಒಯ್ದಿದ್ದಾರೆ. ಸರಿ, ಅವರು ದರೋಡೆಕಾರರಾಗಿದ್ದರೆ ಕೈಗೆ ಸಿಕ್ಕಿದ್ದನ್ನು ದೋಚುವುದು ಅವರ ಧರ್ಮ. ನಾವು ನಮ್ಮನ್ನು ಅದೃಷ್ಟವಂತರು ಎಂದುಕೊಳ್ಳಬೇಕು. ಅವರು ನಮ್ಮನ್ನು ಜೀವ ಸಹಿತ ಬಿಟ್ಟಿದ್ದಾರೆ. ಅವರು ನಮ್ಮನ್ನು ಕೊಲೆ ಮಾಡಬಹುದಾಗಿತ್ತು" "ಅವರ ಕೈಲಿ ಸಿಕ್ಕಿಹಾಕಿಕೊಂಡವರಲ್ಲಿ ನಾವೇ ಮೊದಲಿಗರಾಗಿರಲಿಕ್ಕಿಲ್ಲ. ಆ ಕುಳ್ಳ ಕದೀಮ..." ದಲ್‌ಜೀತ್ ಮುಖ ಸಿಂಡರಿಸಿಕೊಂಡು ಗೊಣಗಿದ. ಆಮೇಲೆ ಅವನ ಕೈ ಜೇಬಿನೊಳಗೆ ಹೋದಂತೆ ಅವನ ಮುಖ ಅರಳಿತು. "ಅವರು ಅಷ್ಟೇನು ಬುದ್ಧಿವಂತ ಡಕಾಯಿತರಲ್ಲ ರಸ್ಟಿ. ನೋಡು ನನ್ನ ಗಡಿಯಾರ ಮರೆತುಬಿಟ್ಟಿದ್ದಾರೆ. ನೋಡು, ನನ್ನ ಒಂದು ಜೇಬಿನಲ್ಲಿ ಇನ್ನೂ ಸ್ವಲ್ಪ ಚಿಲ್ಲರೆ ಇದೆ!"

"ಒಳ್ಳೇದು ಇಷ್ಟಾದರೂ ಉಳಿದಿದೆಯಲ್ಲಾ" ನಾನೆಂದೆ. "ನಾವು ಉಪವಾಸವಿರ ಬೇಕಾಗಿಲ್ಲ. ಯಾವಾಗ ಬೇಕಾದರೂ ಗಡಿಯಾರ ಮಾರಬಹುದು. ಸಾಧ್ಯವಾದರೆ ಜಾಮನಗರ ಮುಟ್ಟುವವರೆಗೂ ಅದನ್ನು ಮಾರೋದು ಬೇಡ... ನಾವು ಅದನ್ನು ಆಪತ್ಕಾಲಕ್ಕೋಸ್ಕರ ಇಟ್ಟುಕೊಳ್ಳಬಹುದು".

"ಹಾಗಾದರೆ ಇದೇನು ಆಪತ್ಕಾಲವಲ್ಲವೆ?"

"ಇಲ್ಲ ಅಂತಲ್ಲ, ಆದರೂ...."

"ಈ ಸಾಹಸವನ್ನು ನಾವು ಮುಂದುವರಿಸಬೇಕು ಅನ್ನಿಸುತ್ತಾ ನಿನಗೆ? ನೀನಿನ್ನೂ ಪ್ರಯತ್ನವನ್ನು ಕೈಬಿಟ್ಟಿಲ್ಲಾ ತಾನೆ?"

"ನೀನೇನನ್ನುತ್ತೀ?"

"ನಿನ್ನ ಮುಂದೆ ನಾನು ಸೋಲುತ್ತೇನೆ ಅಂದುಕೊಂಡೆಯಾ? ಬಾರಯ್ಯಾ, ರಸ್ಟಿ, ಮೊದಲು ಇಲ್ಲಿಂದ ಹೊರಗೆ ಹೋಗೋಣ. ನಾಳೆ ಶನಿವಾರ. ಹೇಗಾದರೂ ಮಾಡಿ ನಾವು ಆ ಹಡಗನ್ನು ಏರಲೇಬೇಕು".



# ಬಟ್ಟೆಗಳ ಅಪಹರಣ

ದಲ್‌ಜೀತ್ ಮತ್ತು ನಾನು ತೆರೆದ ಗೂಡ್ಸ್‌ವ್ಯಾಗನ್ ಒಂದರ ನೆಲೆಗಟ್ಟಿನ ಮೇಲೆ ಮಲಗಿದೆವು. ಮರುಭೂಮಿ ಪ್ರದೇಶದಲ್ಲಿ ಗೂಡ್ಸ್ ಗಾಡಿ ನಿಧಾನವಾಗಿ ಸಾಗುತ್ತಿತ್ತು. ಬಿಸಿಗಾಳಿ ಒಯ್ಯುತ್ತಿದ್ದ ಮರಳು ನಮ್ಮ ಮೇಲೆ ಬೀಳುತ್ತಿತ್ತು. ಮರಳಿನ ಸಣ್ಣ ಕಣಗಳು ನಮ್ಮ ತಲೆ, ಬಾಯಿ ಮತ್ತು ಕಣ್ಣುಗಳಿಗೆ ಅಡರುತ್ತಿದ್ದುವು. ಅದರಿಂದ ತಪ್ಪಿಸಿಕೊಳ್ಳುವಂತೆಯೇ ಇರಲಿಲ್ಲ. ದಲ್‌ಜೀತ್ ಮುಖವಂತೂ ಒಣ ಮಣ್ಣಿನಿಂದ ಮುಚ್ಚಿತ್ತು. ನನ್ನದೂ ಅದೇ ಹಣೆಬರಹವಾಗಿತ್ತು. ಸೂರ್ಯ ನಮಗೆ ತನ್ನ ಚುರುಕು ಮುಟ್ಟಿಸಿದ್ದ. ಒಂದು ಮೂಲೆಯಲ್ಲಿ ಸ್ವಲ್ಪ ನೆರಳಿತ್ತು. ಉಳಿದಿದ್ದ ಹಣದಿಂದ ತಂದಿದ್ದ ಬಾಳೆಹಣ್ಣನ್ನು ಆಗಾಗ ಮೆಲ್ಲುತ್ತಿದ್ದೆವು.

ಬೆಳಗಾಗುವ ಹೊತ್ತಿಗೆ ಹೊಟ್ಟೆಗಿಲ್ಲದೆ ಸಾಯಬೇಕಾಗುತ್ತದೆಯಾದ್ದರಿಂದ ಸ್ವಲ್ಪ ಬಾಳೆಹಣ್ಣು ಉಳಿಸಿಕೊಳ್ಳೋಣವೆಂದು ಹೇಳಿದೆ.

"ನಾಳೆ ತಾನೇ ಬೆಳಗ್ಗೆ ಆಗೋದು" ದಲ್‌ಜೀತ್ ಅಂದ. "ನನಗೀಗ ಹಾಸಿವಾಗ್ತಿದೆ. ಅಲ್ಲದೆ ಬೆಳಗ್ಗೆ ಹೊತ್ತಿಗೆ ನಾವು ಜಾಮ್‌ನಗರ ಮುಟ್ಟೇಬಿಡುತ್ತೇವೆ".

"ಅಕಸ್ಮಾತ್ ಹಡಗು ಹೊರಟು ಹೋಗಿದ್ದರೆ?"

"ಹಡಗು ಹೋಗಿರುವುದಿಲ್ಲ ಅಲ್ಲೇ ಇರುತ್ತೆ!"

"ನಿನಗೆ ಹೇಗೆ ಗೊತ್ತು?" ನಾನು ಕೇಳಿದೆ.

"ನಾನೊಬ್ಬ ಆಶಾವಾದಿ".

"ಹಡಗು ಯಾವತ್ತು ಬೇಕಾದರೂ ಹೊರಡಬಹುದು. ಬಹುಶಃ ಇಷ್ಟು ಹೊತ್ತಿಗೆ ಹೊರಟು ಹೋಗಿರಲೂ ಬಹುದು. ದಲ್‌ಜೀತ್ ಆಗ ಏನು ಮಾಡುವುದು. ದುಡ್ಡು ಇಲ್ಲದೆ ತೊಂದರೆಗೆ ಸಿಕ್ಕಿ ಹಾಕಿಕೊಳ್ಳುತ್ತೇವೆ".

"ಇಲ್ಲದ್ದು ಯೋಚನೆ ಮಾಡಬೇಡ ರಸ್ಟಿ, ಅಷ್ಟೊಂದು ಆತಂಕ ಪಟ್ಟುಕೋಬೇಡ. ತೊಂದರೆಗೆ ಸಿಕ್ಕಿ ಹಾಕಿಕೊಂಡರೆ ಗಡಿಯಾರ ಮಾರೋಣ. ಸ್ಕೂಲಿಗೆ ಹಿಂತಿರುಗೋಣ.

ಸ್ಕೂಲಿನಿಂದ ನಮ್ಮನ್ನು ಹೊರದೂಡುವುದಿಲ್ಲ. ಅವರು ನಮ್ಮನ್ನು ಹೊರಗೆ ಹಾಕೊಲ್ಲ. ಏಕೆಂದರೆ ಅವರು ನಮ್ಮ ತಂದೆ ಕೊಡುವ ಹಣ ಕಳಕೋತಾರೆ. ನೀನಿಷ್ಟಪಟ್ಟರೆ ನಾವು ಪುನಃ ಓಡಿಹೋಗಬಹುದು."

"ಆ ಹಡಗು ಅಲ್ಲಿದ್ದರೆ ಒಳ್ಳೇದು" ನಾನೆಂದೆ.

"ಅದು ಅಲ್ಲಿದ್ದೇ ಇರುತ್ತೆ. ನಾವು ನಾಳೆ ಆ ಹಡಗಿನಲ್ಲಿ ಹೊರಟು ಹೋಗ್ತೀವಿ. ನೀನು ಮೊಂಬಾಸಕ್ಕೆ ಬಂದು ನನ್ನ ಜೊತೆ ಸ್ವಲ್ಪಕಾಲ ಇರುತ್ತೀಯೆ. ಬಹುಶಃ ನಾನು ನಿನ್ನ ಚಿಕ್ಕಪ್ಪನೊಡನೆ ಹಡಗಿನಲ್ಲಿ ಇರುತ್ತೀನಿ." ನಾನು ಹೇಳಿದೆ. "ಅಬ್ಬಾ ಎಷ್ಟು ರೋಮಾಂಚಕಾರಿಯಾಗಿರುತ್ತದೆ! ಶಾಲೆಗೆ ಹೋಗುವ ತಾಪತ್ರಯವೇ ಇಲ್ಲ".

"ನಿನ್ನ ಜೊತೆ ನಾನು ಬಂದರೂ ಬರಬಹುದು. ರಸ್ಟಿ, ನನಗಂತೂ ವ್ಯಾಪಾರದಲ್ಲಿ ಏನೂ ಆಸಕ್ತಿ ಇಲ್ಲ" ಎಂದ ದಲ್‌ಜೀತ್.

"ನಾವಿಬ್ಬರೂ ಒಟ್ಟಿಗೆ ಪ್ರಪಂಚವನ್ನೆಲ್ಲಾ ನೋಡಬಹುದು" ನಾನೆಂದೆ.

"ಅಬ್ಬಾ, ನಾವು ಎಂತಹ ದೊಡ್ಡ ಕನಸು ಕಾಣುತ್ತಿದ್ದೇವೆ!"

"ಒಳ್ಳೇದು, ಅಂತೂ ನಾವು ಯಾವುದೋ ಒಂದು ಕಡೆಗೆ ಹೊರಟಿದ್ದೇವೆ. ನನ್ನಜ್ಜ ಹೇಳುತ್ತಿದ್ದರು. (ಪಂಜಾಬ್‌ನಲ್ಲಿ ತಯಾರಿಸಿದ ಬಟ್ಟೆಯನ್ನು ಮಾರಲು ಅವರು ಪ್ರಪಂಚವನ್ನೆಲ್ಲಾ ಸುತ್ತುಹಾಕುತ್ತಿದ್ದರು). "ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಹೋಗುವ ಮುಖ್ಯ ಉದ್ದೇಶ ಆ ಸ್ಥಳಗಳ ನಡುವೆ ಏನೇನಿದೆ ಮತ್ತು ಅವುಗಳ ವಿಶೇಷತೆಗಳೇನು ಎಂಬುದನ್ನು ತಿಳಿದುಕೊಳ್ಳುವುದು. "ಆ ಮಧ್ಯೆ ಅವರು ಬಟ್ಟೆ ಮಾರುತ್ತಿದ್ದರು" ನಾನೆಂದೆ "ಅವರು ನಮ್ಮ ಹಾಗೆ ಎಂದೂ ಕನಸು ಕಾಣುತ್ತಿರಲಿಲ್ಲವಲ್ಲ".

"ನೀನು ನಿನ್ನ ಪ್ರಯತ್ನ ಕೈಬಿಡುತ್ತಿದ್ದೀಯಾ ರಸ್ಟಿ."

"ಇಲ್ಲ, ನಾನು ಕೈಬಿಡುತ್ತಿಲ್ಲ."

ಆದರೆ ಆ ರಾತ್ರಿ ಪ್ರಯಾಣ ಅತಿ ಕಠಿಣವಾಗಿತ್ತು. ಗಾಡಿ ಅತಿ ಬೇಸರವಾಗುವಷ್ಟು ನಿಧಾನವಾಗಿ ಹೋಗುತ್ತಿತ್ತು. ಅನೇಕ ಜಾಗಗಳಲ್ಲಿ ನಿಂತುಬಿಡುತ್ತಿತ್ತು. ಚಿಕ್ಕ ನಿಲ್ದಾಣದಲ್ಲಿ ದನಗಳ ಮೇವನ್ನು ತುಂಬಿದ ಮೂಟೆಗಳನ್ನು ವ್ಯಾಗನ್‌ನೊಳಗೆ ಎಸೆದಾಗ ನಮ್ಮನ್ನು ಅಲ್ಲೇ ಸಮಾಧಿ ಮಾಡಿದಂತಾಯಿತು. ಆದರೆ ಅದರ ಮೇಲೆ ಆರಾಮವಾಗಿ ಮಲಗಿಕೊಳ್ಳಬಹುದು ಎಂದು ಗೊತ್ತಾದನಂತರ ಮುಂಜಾವಿನ ಬೆಳಕು ಕಾಣುವವರೆಗೂ ಅದರ ಮೇಲೆ ಮೈಚಾಚಿ ಆರಾಮವಾಗಿ ಮಲಗಿದೆವು. ಬೆಳಗಾದಾಗ ನಾವು ಮುಟ್ಟಬೇಕಾಗಿರುವ ಸ್ಥಳ ಹೆಚ್ಚು ದೂರವಿಲ್ಲವೆಂದು ನಮಗೆ ಗೊತ್ತಾಯಿತು. ಭೂಪ್ರದೇಶ ಸಂಪೂರ್ಣ ಬದಲಾಗಿತ್ತು. ನಾವು ಮರುಭೂಮಿಯನ್ನು ಬಿಟ್ಟು ಕಡಲ ತೀರದ ಬಯಲ ಕಡೆಗೆ ಸಾಗಿದ್ದೆವು.

ಎತ್ತರದಲ್ಲಿ ತೂಗಾಡುತ್ತಿದ್ದ ತಾಳೆ ಜಾತಿಯ ಮರಗಳು ದೂರ ದೂರ ಸರಿಯುತ್ತಿದ್ದವು. ಕಡಲು ಸಮೀಪಿಸುತ್ತಿತ್ತು. ನನ್ನ ಜೀವಮಾನದಲ್ಲಿ ಮೊದಲ ಬಾರಿಗೆ ನಾನು ಸಮುದ್ರವನ್ನು ಕಂಡೆ.

ಸಮುದ್ರ ನಾನು ಕಲ್ಪಿಸಿಕೊಂಡಿದ್ದಂತೆಯೇ ಇತ್ತು. ಅದು, ವಿಶಾಲವಾದ, ಜನವಸತಿಯಿಂದ ದೂರವಾದ, ಆಕಾಶನೀಲಿ ಬಣ್ಣದ ಆ ಸಮುದ್ರ ಮನ ಸೆಳೆಯಿತು. ಅಲ್ಲಿ ತೀರದ ಮೇಲಿನ ಮೃದುವಾದ ಗಾಳಿಗೆ ಓಲಾಡಿಕೊಂಡು ಹೋಗುತ್ತಿದ್ದ ಅರಬ್ ದೇಶದ ಚಿಕ್ಕ ಹಡಗನ್ನು ನಾನು ಮೊದಲ ಬಾರಿಗೆ ನೋಡಿದೆ. ಗೂಡ್ಸ್‌ಗಾಡಿ, ಬಯಲಿನ ಮಧ್ಯದಿಂದ ಸಮುದ್ರದ ಕಡೆಗೆ ಹರಿಯುತ್ತಿದ್ದ ಒಂದು ಹೊಳೆಯ ಮೇಲಿನ ಸೇತುವೆ ಮೇಲೆ ನಿಂತಿತು.

ನಾವು ಅಲ್ಲಿ ಇಳಿದು ಗಾಡಿಯಲ್ಲಿ ಕುಳಿತರೂ ಸುಮ್ಮನಿದ್ದ ಬ್ರೇಕ್‌ಮ್ಯಾನ್‌ಗೆ ಧನ್ಯವಾದ ಸೂಚಕವಾಗಿ ಕೈ ಬೀಸಿದೆವು. ನಂತರ ಹೊಳೆಯ ದಡವನ್ನು ವೇಗವಾಗಿ ದಾಟಿಕೊಂಡು ಹೋಗಿ, ಗಾಡಿ ಮುಂದೆ ಹೋಗುವವರೆಗೂ ಸೇತುವೆಯ ಕೆಳಗೆ, ಅಡಗಿಕೊಂಡಿದ್ದೆವು. ನಾವು ರೈಲಿನ ಗಾರ್ಡ್‌ನ ಕಣ್ಣಿಗೆ ಬೀಳಲು ಇಷ್ಟಪಡಲಿಲ್ಲ. ಏಕೆಂದರೆ ಅವನಿಗೆ ಬ್ರೇಕ್‌ಮ್ಯಾನ್‌ನಷ್ಟು ತಾಳ್ಮೆಯ ಸ್ವಭಾವ ಇರಲಿಲ್ಲ. ನಮ್ಮನ್ನು ಬಿಟ್ಟು ಬೇರಾರೂ ಅಲ್ಲಿರಲಿಲ್ಲ. ಧೂಳು ಮತ್ತು ಪ್ರಯಾಣದಿಂದ ಮಾಸಿದ್ದ ಬಟ್ಟೆಯನ್ನು ಕಳಚಿ, ಹೊಳೆಯಲ್ಲಿ ಕೈ ಕಾಲು ಬಡಿಯುತ್ತಾ ಕನ್ನೈದಿಲೆಗಳ ಜೊಂಡುಗಳ ಮಧ್ಯೆ ದಾರಿಮಾಡಿಕೊಂಡು ಈಜಾಡಿದೆವು. ನೀರಿನ ವೇಗ, ಬೆಟ್ಟಗಳಿಂದ ಹರಿದು ಬರುತ್ತಿದ್ದ ನದಿಗಳ ರಭಸಕ್ಕಿಂತ ನಿಧಾನವಾಗಿತ್ತು. ಬೆಚ್ಚನೆಯ ನೀರು ಪರ್ವತಗಳಿಂದ ಬರುವ ನೀರಿನಂತೆ ಜಡವಾಗಿರಲಿಲ್ಲ. ಆಯಾಸಗೊಂಡಿದ್ದ ನಮ್ಮ ದೇಹಕ್ಕೆ ಆ ನೀರು ತುಂಬ ಹಿತವಾಗಿತ್ತು. ಹೊಸ ಹುರುಪು ಉಲ್ಲಾಸ ತಂದಿತು.

ನಾವು ಒಬ್ಬರ ಮೇಲೊಬ್ಬರು ನೀರೆರಚಿಕೊಂಡು ನದಿಯ ನೀರಲ್ಲಿ ಸಾಕಷ್ಟು ಆಡಿದೆವು. ದಲ್‌ಜೀತ್ ನೀರೊಳಗೆ ಈಜಲು ಪ್ರಯತ್ನಿಸುತ್ತಾ ಹೊರಗೆ ಬಂದಾಗ ಕನ್ನೈದಿಲೆ ಹೂವು ಅವನ ಉದ್ದ ಕೂದಲಿಗೆ ಸಿಕ್ಕಿ ಹಾಕಿಕೊಂಡು ಹಾಳಾಗಿ ಬಂದಿತ್ತು. ನಾವು ಸುಮಾರು 15 ನಿಮಿಷಗಳವರೆಗೆ ನೀರಲ್ಲಿ ಇದ್ದೆವು. ಆಗ ನಮಗೆ ಸುತ್ತು ಮುತ್ತಲ ಪರಿವೆಯೇ ಇರಲಿಲ್ಲ. ನಾವು ದಡಕ್ಕೆ ಹತ್ತಿಬಂದಾಗ, ನಮ್ಮ ಬಟ್ಟೆಗಳು ಕಾಣೆಯಾಗಿದ್ದವು. ದಲ್‌ಜೀತ್‌ನ ಪಗಡಿ ಮಾತ್ರ ಇತ್ತು.

ದಡದ ಎತ್ತರದ ಜಾಗದ ಮೇಲೆ, ಬರಿ ಲಂಗೋಟಿ ಹಾಕಿಕೊಂಡಿದ್ದ ಮೂರು ಹುಡುಗರು ನಮ್ಮನ್ನು ದಿಟ್ಟಿಸಿ ನೋಡುತ್ತಿದ್ದರು. ಅವರಲ್ಲಿ ದೊಡ್ಡವನು ನಮ್ಮ ಬಟ್ಟೆಗಳನ್ನು ಹಿಡಿದುಕೊಂಡಿದ್ದನು.

"ಒಳ್ಳೇತನದಿಂದ ದಯವಿಟ್ಟು ನಮ್ಮ ಬಟ್ಟೆಗಳನ್ನು ತಂದುಕೊಡಿ", ದಲ್‌ಜೀತ್ ಹಿಂದಿಯಲ್ಲಿ ಹೇಳಿದ. "ನನ್ನ ಪಗಡಿ ಬಿಟ್ಟಿರುವುದು ನಿಮ್ಮ ಒಳ್ಳೆಯ ಗುಣ, ಆದರೆ ಆ ಪಗಡಿ ತಲೆ ಮೇಲೆ ಬಿಟ್ಟು ಇನ್ನೆಲ್ಲಿಗೂ ಹಾಕಲು ಬರುವುದಿಲ್ಲ". ಮೂರು ಹುಡುಗರೂ ಗೊಳ್ಳೆಂದು ನಗುತ್ತಾ ಹೊಲದ ಕಡೆ ಓಡಿದರು.

"ವಾಪಸ್ ಬನ್ನಿ!" ದಲ್‌ಜೀತ್ ಗಟ್ಟಿಯಾಗಿ ಕೂಗಿದ.

"ನಾವೇ ಅವರನ್ನು ಹಿಂಬಾಲಿಸೋಣ". ಎಂದೆ ನಾನು. ಪರಿಸ್ಥಿತಿ ಒಳ್ಳೆಯ ಪ್ರಾಣ

ಸಂಕಟಕ್ಕಿಟ್ಟುಕೊಂಡಿತ್ತು. ದಲ್‌ಜೀತ್‌ಗೆ ಗಡಿಯಾರ ಮತ್ತು ಪಗಡಿಯಾದರೂ ಇತ್ತು. ಆದರೆ ನನ್ನ ಹತ್ತಿರ ಅದೂ ಇರಲಿಲ್ಲ. ನಾವು ಹತಾಶರಾಗಿ ಆ ಹುಡುಗರ ಬೆನ್ನಟ್ಟಿಕೊಂಡು ಓಡಿದೆವು.

ಕೆಲವು ಹಳ್ಳಿ ನಾಯಿಗಳು ಬಾಸ್ಕರ್ ವಿಲ್ಲೀಸ್ ಬೇಟೆನಾಯಿಗಳಂತೆ ಬೊಗಳುತ್ತಾ ನಮ್ಮನ್ನು ಸುತ್ತುವರಿದವು. ಅವುಗಳ ಹಿಂದೆಯೇ ಇಬ್ಬರು ಗಂಡಸುರು ದೊಣ್ಣೆಗಳನ್ನು, ಕೆಲವು ಹುಡುಗರು ಕಲ್ಲುಗಳನ್ನು ಹಿಡಿದು ಬಂದರು. ನಾವಿಬ್ಬರೂ ತಡಮಾಡದೆ ಇದ್ದ ಶಕ್ತಿಯನ್ನೆಲ್ಲಾ ಒಗ್ಗೂಡಿಸಿಕೊಂಡು ಅತಿ ವೇಗದಿಂದ ಓಡಿ ಹೋದೆವು. ನಾವು ಪುನಃ ಹೊಳೆ ದಾಟುವವರೆಗೆ ಉಸಿರು ಕೂಡಾ ತೆಗೆದುಕೊಳ್ಳಲಿಲ್ಲ. ಹಳ್ಳಿ ಜನ ನಮ್ಮನ್ನು ಅನುಸರಿಸಿಕೊಂಡು ಆ ಕಡೆಯಿಂದ ಈ ಕಡೆಗೆ ಬರಲಿಲ್ಲ. ನಾವೀಗ ಬೇರೆಯವರ ಸರಹದ್ದಿನಲ್ಲಿದ್ದೇವೆಂದು ಧೈರ್ಯ ಬಂತು. ಆ ಹಳ್ಳಿ ಜನರು ತಮ್ಮ ಕೋಲನ್ನು ನಮ್ಮ ಕಡೆ ಆಡಿಸಿದರು. ನಾವು ನಮ್ಮ ಮುಷ್ಟಿಯನ್ನು ಅವರ ಕಡೆ ಆಡಿಸಿದೆವು; ಆದರೆ ನಾವಿನ್ನೂ ವಸ್ತ್ರರಹಿತರಾಗಿಯೇ ಇದ್ದೆವು. ನಾವು ಹೊಳೆಯಿಂದಾಚೆ ಒಂದು ಮಾವಿನ ತೋಪಿನಲ್ಲಿ ಆಶ್ರಯ ಪಡೆದೆವು. ಅಲ್ಲಿ ನಮ್ಮನ್ನು ಬಿಟ್ಟು ಮತ್ಯಾರೂ ಇರಲಿಲ್ಲ.

"ಹಾ, ನಾವು ಈಗೇನು ಮಾಡಬೇಕು?" ದಲ್‌ಜೀತ್ ಕೇಳಿದ.

"ನಾವು ಜಾಮ್‌ನಗರಕ್ಕೆ ನಡೆದುಕೊಂಡು ಹೋಗೋಣ" ತುಂಬಾ ದೂರ ಇರಲಾರದು". ನಾನೆಂದೆ.

"ಬರೀ ಮೈಯಲ್ಲೇ? ಏನು ಹೇಳ್ತಿದ್ದಿ?"

"ಯಾಕಾಗಬಾರದು? ಕತ್ತಲಾಗುವವರೆಗೂ ನಾವು ಕಾಯೋಣ".

"ಬೆಳಗಾದ ನಂತರ?"

"ಓಹೋ, ಏನಾದರೂ ದಾರಿ ಹುಡುಕೋಣ, ನಿನ್ನ ಗಡಿಯಾರ ಮಾರಿ ಬಟ್ಟೆ ಕೊಂಡುಕೊಳ್ಳೋಣ".

ಬಟ್ಟೆ ಇಲ್ಲದೆ ಗಡಿಯಾರ ಕಟ್ಟಿಕೊಂಡು ಅಂಗಡಿಗೆ ಹೋಗಿ, ಮಾರಲು ಸಿದ್ಧರಿದ್ದೇವೆ ಎಂದು ಹೇಳುವುದು ಹೇಗೆ? ನನಗಂತೂ ಇದನ್ನು ಊಹಿಸಲೂ ಸಹ ಸಾಧ್ಯವಾಗಲಿಲ್ಲ. "ನಾವು ಸಾಧುಗಳಂತೆ ಅಥವಾ ಸಾಧುಗಳ ಶಿಷ್ಯರಂತೆ ನಟಿಸೋಣ. ಇದೆಲ್ಲಾ ಈಗಿನ ಕಾಲದಲ್ಲಿ ಒಂದು ಫ್ಯಾಷನ್. ಅದರಲ್ಲೂ ಬರೀ ಮೈಯಲ್ಲಿ ಓಡಾಡುವ ಸಾಧುಗಳನ್ನು ಶ್ರೇಷ್ಠ ಸಾಧುಗಳೆಂದು ಪರಿಗಣಿಸಲಾಗುತ್ತದೆ. ನಮಗೆ ರಾತ್ರಿ ಉಚಿತವಾಗಿ ಊಟ ಮತ್ತು ವಸತಿಗೃಹ ಸಿಕ್ಕಬಹುದು".

"ಬೆಳಗ್ಗೆ ಹೊತ್ತಿಗೆ, ಹಡಗು ನಮ್ಮನ್ನು ಬಿಟ್ಟು ಹೊರಟು ಹೋಗಿರುತ್ತದೆ. ಕಡೆಗೆ ಆಗೋದೆ ಹೀಗೆ".

"ನಾನು ಅದರ ಬಗ್ಗೆ ಯೋಚಿಸಿಯೇ ಇರಲಿಲ್ಲ..."

ನಾವು ಅಲ್ಲಿ ಕುಳಿತು, ನಮ್ಮ ಬಿಕ್ಕಟ್ಟಿನ ಬಗ್ಗೆ ಚರ್ಚಿಸುತ್ತಿದ್ದೆವು. ಆಗ ರೈಲ್ವೆ ಇಲಾಖೆ ಕೆಲಸಗಾರರಂತೆ ಕಾಣಬರುತ್ತಿದ್ದ ಇಬ್ಬರು ವ್ಯಕ್ತಿಗಳು ನಾವಿದ್ದ ಹೊಳೆ ಕಡೆಗೆ ಇಳಿದು

ಬರುತ್ತಿದ್ದರು. ಅವರುಗಳು ರೈತರಂತೆ ಪಂಚೆ ಉಡದೆ, ಷರಾಯಿ ಶರಟು ಮತ್ತು ಷೂಗಳನ್ನು ಹಾಕಿಕೊಂಡಿದ್ದರು. ಅವರು ನೀರು ಕುಡಿಯಲು ನದಿಗೆ ಹೋಗುತ್ತಿದ್ದರೆಂದು ಅನಿಸಿತು. ಆಗ ನನಗೆ ಒಂದು ಕೆಟ್ಟ ಆಲೋಚನೆ ಹೊಳೆದು ಬುದ್ಧಿ ಚುರುಕಾಯಿತು.

ದಲ್‌ಜೀತ್‌ಗೆ ನಾನು ಕೂಡಲೇ ಹೇಳಿದೆ, "ನಿನಗೆ ಅವರು ಕಾಣಿಸ್ತಿದ್ದಾರಾ?"

"ಹೌದು, ನೋಡುತ್ತಿದ್ದೇನೆ". ಅವನು ನನ್ನ ಮನಸ್ಸಿನಲ್ಲಿರುವುದನ್ನು ಬೇಗ ಗ್ರಹಿಸಿದ. "ಹೌದು ರಸ್ಟಿ, ಇದು ನಮಗೆ ಒದಗಿರುವ ಒಳ್ಳೆಯ ಅವಕಾಶ. ಇದನ್ನು ಬಿಡಬಾರದು. ನಾವು ಖಂಡಿತ ಯಾರಿಗೂ ಕನಿಕರ ತೋರಿಸಬಾರದು. ಜ್ಞಾಪಕ ಇಟ್ಟುಕೋ! ಈ ಪ್ರಪಂಚದಲ್ಲಿ ನಮ್ಮಂಥ ಸಭ್ಯರಿಗೆ ಸ್ಥಾನವಿಲ್ಲ. ನಾವೂ ಸಹ ನಮ್ಮ ರೀತಿ ನೀತಿ ಬದಲಾಯಿಸಿಕೊಳ್ಳಬೇಕು. ಇಲ್ಲಿ ಜನ ಹೇಗೆ ವರ್ತಿಸುತ್ತಾರೋ ಹಾಗೇ ನಾವೂ ವರ್ತಿಸಬೇಕು. ನಾವು ನಿಶ್ಶಬ್ದವಾಗಿ ಪೊದೆಗಳ ಹಿಂದೆ ಹೋಗೋಣ, ಅವರಿಗೆ ನಾವು ಕಾಣಿಸಿಕೊಳ್ಳದ ಹಾಗೆ!" ನಮ್ಮ ಬತ್ತಲೆ ಮೈಯನ್ನು ತರಚುತ್ತಿದ್ದ ಮುಳ್ಳುಗಳನ್ನೂ ಲೆಕ್ಕಿಸದೆ ನಾವು ಅಂಬೆಗಾಲಿಡುತ್ತಾ, ದೇಕುತ್ತಾ ಹೊಳೆಯ ಹತ್ತಿರ, ಅವರು ಸ್ನಾನ ಮಾಡುತ್ತಿದ್ದ ಸ್ಥಳಕ್ಕೆ ಬಂದೆವು. ಅವರು ಸಾಕಷ್ಟು ಗಲಾಟೆ ಮಾಡಿಕೊಂಡು ಮಕ್ಕಳಂತೆ ನೀರಿನಲ್ಲಿ ಆಟವಾಡುತ್ತಿದ್ದರು. (ತೆರೆದ ಸ್ಥಳದಲ್ಲಿ ಸ್ನಾನ ಮಾಡುವಾಗ ವಯಸ್ಕರು ಸಾಕಷ್ಟು ಚಂಚಲಚಿತ್ತರಾಗುವುದನ್ನು ನಾನು ಅನೇಕ ಸಲ ಗಮನಿಸಿದ್ದೇನೆ. ಬಹುಶಃ ಅವರು ಆಟವಾಡುವಾಗ ಅಮೀಬ ಮೂಲಕ ಮನುಷ್ಯನ ಉತ್ಪತ್ತಿಯ ಕೊಂಡಿಯನ್ನು ಹಿಡಿದು ಹಿಂದಕ್ಕೆ ಹೋಗಿರಬಹುದು!) ತಮ್ಮ ಸ್ನಾನ ಸಂಭ್ರಮದಲ್ಲಿ ಅವರು ನಮ್ಮನ್ನು ನೋಡಲೂ ಇಲ್ಲ. ನಮ್ಮ ಮಾತನ್ನು ಕೇಳಿಸಿಕೊಳ್ಳಲೂ ಇಲ್ಲ. ಅವರ ಬಟ್ಟೆಗಳು ಕೆಲವು ಗಜಗಳ ದೂರದಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದವು.

"ನಾನು ಅವುಗಳನ್ನು ತರುತ್ತೇನೆ" ದಲ್‌ಜೀತ್ ಪಿಸುಗುಟ್ಟಿದ. "ಅವರು ನನ್ನನ್ನು ನೋಡಿದರೆ ಯಾವುದೋ ಹಳ್ಳಿ ಹುಡುಗ ಎಂದು ತಿಳಿದುಕೊಳ್ಳಬಹುದು. ಅವರು ನಿನ್ನನ್ನೇನಾದರೂ ನೋಡಿದರೆ ದೇವರೇ ಗತಿ!"

ಅವನು ಪೊದೆಯಿಂದ ಹೊರಕ್ಕೆ ವೇಗದಿಂದ ಮುನ್ನುಗ್ಗಿದ (ಅವನು ಸ್ಕೂಲಿನಲ್ಲಿ ಇದೇ ಹುರುಪು ತೋರಿಸಿದ್ದಿದ್ದರೆ ಒಳ್ಳೆಯ ಓಟಗಾರನಾಗಿರುತ್ತಿದ್ದ). ಎಲ್ಲಾ ಬಟ್ಟೆಗಳನ್ನು ಬಾಚಿಕೊಂಡು ತನ್ನ ಕಂಕುಳಲ್ಲಿಟ್ಟುಕೊಡು ವಾಪಸ್ ನನ್ನ ಹತ್ತಿರಕ್ಕೆ ಬಂದ.

"ಅದ್ಭುತವಾದ ಕೆಲಸ ಮಾಡಿದೆ!" ನಾನು ದಲ್‌ಜೀತ್‌ನ ಕಿವಿಯಲ್ಲಿ ಪಿಸುಗುಟ್ಟಿದೆ. "ಅವರು ಕಿಂಚಿತ್ತೂ ನನ್ನ ಕಡೆ ನೋಡಲಿಲ್ಲ."

ತಮ್ಮ ಬಟ್ಟೆಗಳು ಮಾಯವಾಗಿರುವುದನ್ನು ಅವರು ಕಂಡುಕೊಳ್ಳುವವರೆಗೂ ನಾವು ಕಾಯಲಿಲ್ಲ. ಅವರ ಪೇಚಾಟವನ್ನು ನೋಡುವ ಆಸೆ ನಮಗೆ ಇತ್ತಾದರೂ ನಾವು ಬೇಗ ಅಲ್ಲಿಂದ ಓಟಕ್ಕಿತ್ತು ಮಾವಿನ ತೋಪಿನ ಒಳಕ್ಕೆ ನುಗ್ಗಿದೆವು; ನಾವು ರೈಲುಹಳಿ ದಾಟಿ ಬಯಲು ಪ್ರದೇಶದ ಪಕ್ಕದಲ್ಲಿ ಒಂದು ಬಾವಿ ಸಿಗುವವರೆಗೂ ಓಡಿದೆವು; ಅಲ್ಲಿ ಒಳ್ಳೆಯ

ನೆರಳಿದ್ದ ಹಳೆಯ ಆಲದ ಮರದ ಕೆಳಗೆ ಬಂದು ಅಪಹರಿಸಿಕೊಂಡು ಬಂದಿದ್ದ ಹೊಸ ಬಟ್ಟೆಗಳನ್ನು ಧರಿಸಿಕೊಂಡೆವು. ಅವು ನಮ್ಮ ಅಳತೆಗೆ ಮೀರಿದ್ದ ಬಟ್ಟೆಗಳು, ವಿಪರೀತ ಸಡಿಲವಾಗಿದ್ದವು.



"ಕ್ಯಾಪ್ಟನ್!" ನಾನು ಜೋರಾಗಿ ಕೂಗಿದೆ. "ಜಿಮ್ ಅಂಕಲ್, ನಮಗೋಸ್ಕರ ಕಾಯಿರಿ. ನಾವೂ ಬರ್ತೇವೆ".

ಈಸ್ಟ್ ಇಂಡಿಯಾದ ಒಬ್ಬ ನಾವಿಕ, ಸೆಟೆದು ನಿಂತುಕೊಂಡಿದ್ದ. ನಮ್ಮ ಕಡೆ ನನ್ನ ಕೂಗಿಗೆ ಅವನು ಬರೀ ಕೈ ಬೀಸಿದ ಅಷ್ಟೇ, ನಾನು ಹಡಗುಕಟ್ಟೆಯಲ್ಲಿ ನಿಂತು ಕೈಗಳನ್ನು ಆಡಿಸುತ್ತಾ ಗಾಳಿಯಲ್ಲಿ ಗಟ್ಟಿಯಾಗಿ ಕೂಗುತ್ತಿದ್ದೆ.

"ಕ್ಯಾಪ್ಟನ್ ಜಿಮ್ ಅಂಕಲ್, ನನಗೋಸ್ಕರ ನಿಲ್ಲಿ!"

ಯಾರೂ ಉತ್ತರ ಕೊಡಲಿಲ್ಲ. ನೀರು ಕೊಕ್ಕರೆಗಳು ಉಗಿಹಡಗಿನ ಚಲನೆಯಿಂದ ಚಕ್ರದಂತೆ ಸುತ್ತುತ್ತಾ "ಕ್ಯಾಪ್ಟನ್, ಕ್ಯಾಪ್ಟನ್" ಎಂದು ಬೊಬ್ಬೆ ಹೊಡೆಯುತ್ತಿವೆಯೇನೋ ಅನ್ನಿಸಿತು... ಹಡಗು ಇನ್ನೂ ಮುಂದೆ ಸಾಗಿ ತನ್ನ ವೇಗ ಹೆಚ್ಚಿಸಿಕೊಂಡಿತು; ಕೂಗಿ ಕೂಗಿ ನನ್ನ ಗಂಟಲು ಒಣಗುತ್ತಿತ್ತು. ನಾನು ಬೇಡಿಕೊಳ್ಳುವ ಧ್ವನಿಯಲ್ಲಿ ಪದೇ ಪದೇ ಕೂಗುತ್ತಲೇ ಇದ್ದೆ. ಕಡೆಗೂ ಯಾಕೋಹಾಮಾ, ಸ್ಯಾನ್‌ಡಿಯಾಗೋ, ವಾಲ್‌ಪರೈಸೋ, ಲಂಡನ್, ಎಲ್ಲವೂ ತಪ್ಪಿ ಹೋದವು....

ನಾವು ಗರಬಡಿದವರಂತೆ ಹಡಗುಕಟ್ಟೆ ಮೇಲೆ ನಿಂತಿದ್ದೆವು. ಮಧ್ಯಾಹ್ನದಲ್ಲಿ ನೀರು ಹಕ್ಕಿಗಳು ನಮ್ಮ ಸುತ್ತು ತಿರುಗುತ್ತಾ ತಮ್ಮ ಕೂಗಿನಿಂದ ನಮ್ಮನ್ನು ಅಣಕಿಸುತ್ತಿದ್ದವು. ಒಂದು ಪತ್ರದಲ್ಲಿ ಜಿಮ್ ಅಂಕಲ್ ಬರೆದಿದ್ದ ಅರ್ಥಗರ್ಭಿತ ಮಾತುಗಳ ಬಗ್ಗೆ ನಾನು ವಿಚಾರ ಮಾಡತೊಡಗಿದೆ. "ಮೊದಲು ಏಡನ್ ಕಣಿವೆ, ಆಮೇಲೆ ಸೂಯೇಸ್ ಕಾಲುವೆ ಮೇಲೆ..."

ಆದರೆ ನನ್ನ ಪಾಲಿಗೆ ಬಹುದೂರದ ಮರುಪಯಣವಷ್ಟೇ ಉಳಿದಿತ್ತು. ನನ್ನ ಪೋಷಕರ ಕೋಪ–ತಾಪಗಳನ್ನು ತರಿಸುವ ಪಾಠಶಾಲೆಯ ಕೋಣೆ, ಅವನ್ನು ಪುನಃ ಎದುರಿಸಬೇಕಾದ ದುರ್ದೈವ ನನ್ನನ್ನು ಬಿಡಲಿಲ್ಲ. ದಲ್‌ಜೀತ್ ಬಾಯಿಂದ ಮಾತೇ ಹೊರಡಲಿಲ್ಲ. ಕೊನೆಗೆ ನಾನೇ ಹೇಗೋ ಧೈರ್ಯಮಾಡಿ ಅವನ ಕಡೆ ನೋಡಿದೆ. ಅವನು ನನ್ನತ್ತ ಮುಗುಳ್ನಗೆ ಸೂಸುತ್ತಿರುವುದನ್ನು ನೋಡಿ ಆಶ್ಚರ್ಯಪಟ್ಟೆ. ಅವನು ಸ್ವಲ್ಪವೂ ಖಿನ್ನನಾಗಿರಲಿಲ್ಲ.

"ನಾವು ತುಂಬಾ ತಡಮಾಡಿದೆವು", ಅವನೆಂದ. ನಾವು ನೂರಾರು ಮೈಲಿಗಳು ಬಂದರೂ, ಐದು ನಿಮಿಷ ತಡವಾದ್ದರಿಂದ ನಮ್ಮ ಹೆಬ್ಬಯಕೆಗಳು ಮೂಲೆಗುಂಪಾದವು. ಇದುವರೆಗೆ ನಾವು ಮಾಡಿದ್ದೆಲ್ಲಾ ನಿರರ್ಥಕವಾಯಿತು. "ಹೋಗಲಿ ಬಿಡು. ನಮ್ಮ ಎಲ್ಲಾ ಯೋಚನೆಗಳೂ ವ್ಯರ್ಥವಾದುವು...."

"ನಮ್ಮ ಎಲ್ಲಾ ಕನಸುಗಳೂ!"

"ಕನಸು ಕಾಣುವುದರಲ್ಲಿ ತಪ್ಪೇನಿದೆ?"

"ಏನೂ ಇಲ್ಲ, ಅವು ನನಸಾಗದಿರುವವರೆಗೆ ಎಷ್ಟು ಕನಸುಗಳನ್ನು ಬೇಕಾದರೂ ಕಾಣುತ್ತಿರಬಹುದು. ನಾವು ಸ್ಕೂಲಿಗೆ ಹಿಂದಿರುಗೋಣ, ಮತ್ತೆ ಬೇರೆ ಬೇರೆ ಕನಸುಗಳನ್ನು ಕಾಣೋಣ".

"ದಲ್‌ಜೀತ್, ನೀನೊಬ್ಬ ದಾರ್ಶನಿಕ ಅಂತ ನನಗೆ ಗೊತ್ತಿರಲಿಲ್ಲ. ನಾವು ಶಾಲೆಗೆ ಪುನಃ ಹಿಂದಿರುಗಲು ಸಾಧ್ಯ ಅಂದುಕೊಂಡಿದ್ದೀಯಾ! ನೀನು ನಿನ್ನ ಗಡಿಯಾರ ಮಾರಿದರೂ ಸಾಕಾಗೊಲ್ಲ. ನನಗೆ ಬೇಜಾರಾಗಿಬಿಟ್ಟಿದೆ. ನನಗೆಲ್ಲೂ ಹೋಗಲು ಮನಸ್ಸಿಲ್ಲ. ನಾನು ನನ್ನ ಅಂಕಲ್ ಹಿಂತಿರುಗಿ ಬರುವವರೆಗೂ ಈ ಹಡಗುಕಟ್ಟೆ ಮೇಲೇ ಕೂತಿರುತ್ತೇನೆ".

"ಎಷ್ಟು ದಿನಗಳವರೆಗೆ ಹಾಗೆ ಕಾಯುವೆ?"

"ಒಂದೆರಡು ವರ್ಷ". ನಾನು ಮುಗುಳ್ನಗುತ್ತಾ ಹೇಳಿದೆ.

"ವಾಪಸ್ ಹೊಗುವ ಬಗ್ಗೆ ನೀನು ಚಿಂತಿಸಬೇಡ, ನಾವು ಕದ್ದು ಓಡಿ ಬಂದಾಗ ಆ ವಿಷಯ ರಹಸ್ಯವಿರಬೇಕಾಗಿತ್ತು. ಇನ್ನೇನು, ಗುಟ್ಟೂ ಇಲ್ಲ, ರಟ್ಟೂ ಇಲ್ಲ. ನಾವು ಗಡಿಯಾರ ಮಾರಿ ಗಾಡಿಯವನಿಗೆ ಹಣ ಕೊಟ್ಟು ತಂತಿ ಕಳಿಸೋಣ!"

"ಯಾರಿಗೆ, ಮುಖ್ಯೋಪಾಧ್ಯಾಯರಿಗಾ?"

"ಇಲ್ಲ, ಬಾಂಬೆಯಲ್ಲಿರುವ ನನ್ನ ಚಿಕ್ಕಪ್ಪನಿಗೆ, ಅವರು ತಮ್ಮ ಕಾರಲ್ಲಿ ನಮ್ಮನ್ನು ವಾಪಸ್ ಶಾಲೆಗೆ ಕರೆದುಕೊಂಡು ಹೋಗುತ್ತಾರೆ. ನಾವು ಹಾಯಾಗಿ ಪ್ರಯಾಣ ಮಾಡಬಹುದು. ಈ ಸಲ ನಾವು ದಾರಿ ಉದ್ದಕ್ಕೂ ಐಸ್‌ಕ್ರೀಮ್ ಮತ್ತು ಚಿಕನ್ ತಿನ್ನಬಹುದು. ಸ್ವಲ್ಪ ದಿನಗಳಾದರೂ ಮಜವಾಗಿ ಕಾಲ ಕಳೆಯೋಣ. ವಾಪಸಾದ ಮೇಲೆ ನಮಗೇನೂ ಸಿಗುವುದಿಲ್ಲ."

"ಹೌದು", ನಾನೆಂದೆ, "ನಾವು ವಾಪಸ್ ಹೋದ ಮೇಲೆ ಮಜ ಮಾಡಲು ನಮ್ಮ ಹತ್ತಿರ ಏನೂ ಇರುವುದೂ ಇಲ್ಲ."

ನಾವು ಗಾಡಿ ಕಡೆಗೆ ವಾಪಸ್ ನಡೆದುಕೊಂಡು ಹೋಗುತ್ತಿದ್ದಾಗ, ನಾನು ಹೆಚ್ಚಿಗೆ ಮಾತಾಡಲಿಲ್ಲ. ನನ್ನ ಯೋಚನೆ ಬಹಳ ದೂರದವರೆಗೆ ಹೋಗಿತ್ತು. ನಾನು ಮನಸ್ಸಿನಲ್ಲೇ ಮುಂದಿನ ವರ್ಷ ಯಾವಾಗಲಾದರೂ ಲೂಸಿಯಲ್ಲಿ ಜಿಮ್ ಅಂಕಲ್ ಹಿಂದಿರುಗುತ್ತಾರೆ, ಆಗ ಮತ್ತೊಮ್ಮೆ ಈ ತಪ್ಪಿಗೆ ಅವಕಾಶ ಕೊಡುವುದಿಲ್ಲ, ಹಡಗು ಹೊರಡಲು ಸಾಕಷ್ಟು ಮುಂಚೆಯೇ ಅದನ್ನು ಹತ್ತಿರುತ್ತೇನೆ ಎಂದುಕೊಂಡೆ.

ಅಲ್ಲಿ ನಿಂತು ಕೊನೆಯ ಬಾರಿಗೆ ಸಮುದ್ರವನ್ನು ದಿಟ್ಟಿಸಿ ನೋಡಿದೆ. ಉಗಿ ಹಡಗು ಆ ವಿಶಾಲವಾದ, ಅಗಾಧವಾದ ಸಮುದ್ರದಲ್ಲಿ ಬಹಳ ಸಣ್ಣದಾಗಿ ಕಾಣುತ್ತಿತ್ತು.

ಈ ವರುಷ, ಮುಂದಿನ ವರುಷ, ಯಾವಾಗಲಾದರೂ ಸರಿ... ಯಾಕೋಹಾಮ, ವಾಲ್‌ಪರೈಸೋ, ಸ್ಯಾನ್‌ಡಿಯಾಗೋ, ಲಂಡನ್......



Laser typeset at Saravu Graphic Impressions, New Delhi and printed at The Central Electric Press, New Delhi